ಬಾಳಬೆಳಕು ಸಾಹಿತ್ಯಮಾಲೆ—ಕಿರಣ ೧

# 'ಕರ್ಮಯೋಗಿ'

ಬರೆದವ :

**ತಿರುಕ**

ಪ್ರಕಾಶಕರು :

**ಅನಾಥ ಸೇವಾಶ್ರಮ**

ಮಲ್ಲಾಡಿಹಳ್ಳಿ ಪೋಸ್ಟ್, ಹೊಳಲ್ಕೆರೆ ತಾಲ್ಲೂಕು.

ಬೆಲೆ ರೂ. ೧-೮-೦.

# ಅರಿಕೆ

ಪ್ರಿಯ ಬಂಧುಗಳೇ,

ಈ ಕೃತಿಯನ್ನು ನಾನು ಅಚ್ಚು ಹಾಕಿಸಿ ಪ್ರಕಟಿಸಬೇಕೆಂದಾಗಲೀ ಅಥವಾ ರಂಗಭೂಮಿಯ ಮೇಲೆ ಅಭಿನಯಿಸಬೇಕೆಂದಾಗಲೀ ಬರೆದಿರಲಿಲ್ಲ. ಹೃದಯದಲ್ಲಿ ಮೂಡಿದ ಭಾವವನ್ನು ತಡೆಹಿಡಿಯುವ ಸಾಮರ್ಥ್ಯ ಸಾಲದೇ ಗೀಚಿದೆ. ವೈಯಕ್ತಿಕವಾಗಿ ಯಾವುದೊಂದು ವ್ಯಕ್ತಿಯನ್ನಾಗಲೀ ಸಮಾಜವನ್ನಾಗಲೀ ಕುರಿತಾಗಿ ಬರೆದ ಕಥೆಯಲ್ಲವಿದು; ಅಲ್ಪಮತಿಗೆ ಹೊಳೆದ ಕಲ್ಪನೆಯ ಚಿತ್ರ ಅಷ್ಟೆ—ಅಂತಯೇ ಇದರಲ್ಲಿ ಬರುವ ಪಾತ್ರಗಳೂ ಕಲ್ಪನೆಯವೇ.

ಕಥೆಯು ಸಿದ್ಧವಾದ ತರುಣದಲ್ಲೇ ಕರ್ಮ-ಧರ್ಮ ಸಂಯೋಗದಿಂದ ನನ್ನ ಹುಟ್ಟೂರಿನ ಗೆಳೆಯರ ಸಂಘದವರು ಇದನ್ನು ಅಭಿನಯಿಸುವ ಔದಾರ್ಯಕ್ಕೆ ಮನಸ್ಸು ಮಾಡಿದುದರಿಂದ ನೋಡುವ ಭಾಗ್ಯವು ನನಗೆ ದೊರೆಯಿತು. ಅಂದಿನಿಂದಲೂ ಈ ವರೆಗೆ ನಾಲ್ಕೈದು ವರ್ಷಗಳ ದೀರ್ಘಕಾಲ ಈ ಕೃತಿಯು ತಿರುಕನ ಜೋಳಿಗೆಯ ಕಿರುಗತ್ತಲೆಯಲ್ಲೇ ಕೊಳೆಯುತ್ತಿದ್ದು ಇಂದು ಅದೊಂದು ಅಜ್ಞಾತ ಗೆಳೆಯರ ಉದಾತ್ತ್ಯವ-ಅಲ್ಲ-ಸಾಹಸದ ಫಲವಾಗಿ ಬೆಳಕನ್ನು ಕಾಣುತ್ತಿದೆ.

ಇದರ ವಾಚನದಿಂದಾಗಲೀ ನೋಟದಿಂದಲೇ ಆಗಲೀ ಯಾರಿಗಾದರೂ ಆನಂದ ಉಂಟಾದರೆ ಅದರ ಪುಣ್ಯವು ಮುದ್ರಣದ ಭಾರವನ್ನು ಹೊತ್ತ ನನ್ನ ಗೆಳೆಯರ ಮಡಲಿಗೆ; ಅತೃಪ್ತಿ ಅಸಂತೋಷಗಳ ಹೊರೆಯು ತಿರುಕನ ಜೋಳಿಗೆಗೆ. ಪ್ರಕಟಣೆಯ ಹೊರೆಯನ್ನು ಹೊತ್ತು ದುಡಿದ ನನ್ನ ಮಿತ್ರರಿಗೂ ಮತ್ತು ನಾಟಕದ ರಚನೆಯಲ್ಲಿ ಒಂದಲ್ಲೊಂದು ರೀತಿ ಸಹಾಯಕರಾಗಿ ತೆರೆಯ ಮರೆಯಲ್ಲಿ ನಿಂತು ಶ್ರಮಿಸಿದ ಸ್ನೇಹಿತರಿಗೂ ಅವರು ಬೇಡವೆಂದರೂ ಧನ್ಯವಾದಗಳನ್ನಲ್ಲದೆ ಇನ್ನಾವ ಮೆಚ್ಚಿಗೆಯನ್ನು ಈ ತಿರುಕನು ಕೊಡಲಾಪನು?

ಮಲ್ಲಾಡಿಹಳ್ಳಿ.
ತಾ॥ ೧೫-೧-೧೯೪೮

ತಮ್ಮ ನಮ್ರ
**ತಿರುಕ**

# ನಿವೇದನ

ಪ್ರಿಯ ಬಂಧುಗಳೇ,

ನಮ್ಮ **' ಬಾಳ ಬೆಳಕು '** ಸಾಹಿತ್ಯಮಾಲೆಯ ಪ್ರಥಮ ಕಿರಣವಾದ ಈ ಕರ್ಮಯೋಗಿಯ ಪ್ರತಿಗಳೆಲ್ಲವೂ ಮುಗಿದು ಆಗಲೇ ಹತ್ತೆಂಟು ತಿಂಗಳು ಕಳೆದುಹೋಯ್ತು. ಆದರೂ ಹಣದ ಕೊರತೆಯಿಂದ ಅದು ಪುನರ್ಮುದ್ರಣ ವನ್ನು ಕಾಣಲು ಇಷ್ಟೊಂದು ಕಾಲಾವಕಾಶವು ಬೇಕಾಯ್ತು. ಯಾವುದೊಂದು ಸಂಘ ಸಂಸ್ಥೆಗಳ ಅಥವಾ ಪುಸ್ತಕ ಭಂಡಾರಗಳ ಸಹಕಾರವಿಲ್ಲದೇ ಇದು ಇಷ್ಟು ಬೇಗನೇ ಪುನರ್ಮುದ್ರಣವನ್ನು ಕಾಣುವುದಕ್ಕೆ ವಾಚಕರ ಪ್ರೋತ್ಸಾಹವೇ ಕಾರಣವೆಂದು ನಾವು ತಿರುಗಿ ಹೇಳಬೇಕಾದುದಿಲ್ಲ. ಆ ಬಗ್ಗೆ ಅವರೆಲ್ಲರಿಗೆ ನಮ್ಮ ಹೃತ್ಪೂರ್ವಕ ಧನ್ಯವಾದಗಳು.

ಇತ್ತೀಚೆಗೆ **' ಬಾಳ ಬೆಳಕು '** ಸಾಹಿತ್ಯಮಾಲೆಯ ಎಲ್ಲ ಪುಸ್ತಕ ಗಳಿಗೂ ಸಂಸ್ಥಾನಾಮುಳೆ ಎಲ್ಲ ಮಾಧ್ಯಮಿಕ ಮತ್ತು ಪ್ರೌಢ ವಿದ್ಯಾಶಾಲೆಗಳ ಪುಸ್ತಕಭಂಡಾರಗಳಿಗೂ, ಹಾಗೂ ವಿಲೇಜ್ ಪಂಚಾಯ್ತಿ ಲೈಬ್ರರಿಗಳಿಗೂ ಸರಕಾರದಿಂದ ಮಂಜೂರಾತಿ ದೊರೆತಿದೆ ಎಂದು ತಿಳಿಸಲು ಸಂತೋಷಪಡುವೆ ವಲ್ಲದೇ ಆ ಬಗ್ಗೆ ನಮ್ಮ ವಂದನೆಗಳನ್ನೂ ಅರ್ಪಿಸುತ್ತೇವೆ. ಈ ಕೃತಿಯು ಅಚ್ಚಾದ ಈ ಎರಡು ವರ್ಷಗಳ ಅವಧಿಯಲ್ಲಿ ಎಷ್ಟೋ ಸಂಘ ಸಂಸ್ಥೆಗಳು ಇದನ್ನು ಅಭಿನಯಿಸಿ ಪ್ರೇಕ್ಷಕರ ಮೆಚ್ಚುಗೆಗೆ ಪಾತ್ರವಾಗಿವೆ ಎಂದು ತಿಳಿಸಲು ಆನಂದಪಡುತ್ತೇವೆ.

ಎಂದಿನಂತೆ ಇಂದೂ ತಮ್ಮೆಲ್ಲರ ಉದಾರ ಸಹಕಾರವನ್ನು ನೀಡ ಬೇಕಾಗಿ ವಿನಂತಿ.

— **ಪ್ರಕಾಶಕ.**

# ತೃತೀಯ ಮುದ್ರಣ

ಈ ಗ್ರಂಥದ ತೃತೀಯ ಮುದ್ರಣವನ್ನು ನಾಡಿನ ಜನತೆಯ ಪದರಿನಲ್ಲಿ ಸಮರ್ಪಿಸಲು ಹೆಮ್ಮೆಪಡುತ್ತೇವೆ. ಹಿಂದಿನಂತೆಯೇ ಇಂದೂ ತಮ್ಮೆಲ್ಲರ ಸಹಕಾರವನ್ನು ಕೋರಿದೆ.

— **ಪ್ರಕಾಶಕ.**

# ಸಮರ್ಪಣೆ

ನನ್ನ ಮತ್ತು ಜಗತ್ತಿನ ಹಸಿದ ಕರಳಿನ ಕೂಗಿಗೆ ಓಗೊಟ್ಟು
ಉಣಿಸಿ ತಣಿಸಿದ ಪ್ರತ್ಯಕ್ಷ ದೈವಸ್ವರೂಪೀ ಅನ್ನದೇವ
ರೈತನ ಪಾದದಡಿಯಲ್ಲಿ ಭಕ್ತಿಪೂರ್ವಕವಾಗಿ
ಸಮರ್ಪಿಸಲ್ಪಟ್ಟಿದೆ.

## ಮುಖ್ಯ ಪಾತ್ರವರ್ಗ

೧. ಸಂಕಪ್ಪ : ಸಾಲದಲ್ಲಿ ಬಿದ್ದ ಒಬ್ಬ ರೈತ
೨. ಚನ್ನ : ಸಂಕಪ್ಪನ ಅಳಿಯ. (ಉಗ್ರ)
೩. ಗಿರಿಯಪ್ಪ : ಊರ ಸಾಹುಕಾರ.
೪. ಮುದ್ದಜ್ಜ : ಸಾಹುಕಾರನ ಮನೆಯ ಆಳು.
೫. ಕಲ್ಲಪ್ಪ : ಊರಿನ ಗೌಡ.
೬. ರಾಮಯ್ಯ : ಗೌಡನ ಮಗ.
೭. ಸಿದ್ದಪ್ಪ : ಊರಲ್ಲಿಯ ಒಬ್ಬ ರೈತ.
೮. ಲಿಂಗಪ್ಪ : ,, ,,
೯. ಸಂಗಯ್ಯ : ಊರ ಅಯ್ಯನವರು. (ಗುರುಗಳು)
೧೦. ತಿಮ್ಮ : ಊರ ತಲವಾರ

ಮಾದಿಗ–ಹಳ್ಳಿಗರು ವಗೈರೆ.

೧೧. ಗಂಗವ್ವ : ಸಂಕಪ್ಪನ ಮಗಳು.
೧೨. ಸರ್ವಮಂಗಳೆ : ಸಾಹುಕಾರನ ಹೆಂಡತಿ.

ಇತರೇ ಹಳ್ಳಿಯ ಹೆಣ್ಣುಮಕ್ಕಳು ವಗೈರೆ

|| ಓಂ ತತ್ಸತ್ ||

# ಕರ್ಮಯೋಗಿ

## ಪ್ರಾರ್ಥನೆ

ರಾಗ_ನಂದ್ ಝಂಪಾ

ಪ್ರಾಣದಾತೆ ಮಾತೆ ಪ್ರೀತೆ | ಭರತಜನನೀ ಜೈ ಜೈ || ಧೃ ||
ಎದೆಹಾಲ ಒಡಲಿನ ಜ್ಯೋತೀ – | ಮುದದೊಳು ನೀಡಿ
ನೀ ಕಾಯ್ದೆ || ೧ ||

ರಾಗ_ಮಾಮಾಬಿಹಾಗ್_ತ್ರಿತಾಲ

ಕನ್ನಡಾಂಬೆಯಾ ಕೀರ್ತಿಪತಾಕೆ | ಕುಣಿಯುತಾ
ಬಾನೋಳ್ ಹಾರಾಡಲಿ || ಧೃ ||
ಪರಭಾಷೆ ಮೋಽಽಽಹ | ನೀಗೀ ನೀ ನಲಿಸೆ ಸುತರ ತಾಯೆ || ೧ ||

## ಅಂಕ ೧

### ನೋಟ ೧

[ಸಂಕಪ್ಪನ ಮನೆಯ ಮುಂದಿನ ಅಂಗಳ; ಪೂಜೆಗೆ ಅಣಿಯಾಗಿ ನೇಗಿಲು ಮತ್ತು ಅದರ ಪಕ್ಕದಲ್ಲೇ ಒಂದು ಜೊತೆ ಎತ್ತೂ ಕೂಡ ಸಿದ್ಧಮಾಡಲ್ಪಟ್ಟವೆ. ತೆರೆಯು ಮೇಲೇಮತ್ತಿರುವಾಗ ಗಂಗೆಯು ತಂಗವಲ್ಲಿ ಬರೆಯುತ್ತ ಹಾಡುತ್ತಲಿರುವಳು. ಚನ್ನನು ಎತ್ತಿನ ಮೈಮೇಲೆ ಕೈ ಆಡಿಸುತ್ತಲಿರುವನು.]

ಗಂಗವ್ವ—(ರಂಗವಲ್ಲಿ ಬರೆಯುತ್ತ)

ರಾಗ_ಜಂಗಲಾ_ಖವಾಲೀ

ಬರುತಿಹ ಬರುತಿಜನಾ ರವೀ | ತರುತಿಹ ಭಾಗ್ಯದ
ಮಧುರ ಸವೀ || ಧೃ ||
ಭಂಗಿಸಿ ಕಾರಿರುಳನೆ ದೂಡೀ | ರಂಗಿನೋಕಳೀಯಲಿ ಆಡೀ |
ಮಂಗಲ ಹೊಂಬಿಸಿಲನೆ ಸೂಡಿ | ಕಂಗಳಿಗಾನಂದವ ನೀಡೀ || ೧ ||

ಸಂಕಪ್ಪ—(ಪ್ರವೇಶಿಸಿ) ಗಂಗಾ, ಇನ್ನೂ ನೀನು ರಂಗಾ ಬರೀತಾ ಕುಂತರೆ ಕೆಲ್ಸ ಆಗೋದ್ಯಾವಾಗ? ಹಾ-ಅದನ್ನ ಬೇಗ ಮುಗ್ಸಿಬಿಟ್ಟು ಪೂಜೆಗೆ ಸಿದ್ಧ ಮಾಡಿಡು; ನಾನು ಎಲ್ರನ್ನೂ ಕರ್ದು ಬರ್ತೇನೆ. (ಹೋಗುವನು)

ಚನ್ನ—(ಉಗ್ಗುತ್ತ) .... .... ನಾನು ಹೇಳಿದರೆ ಎಲ್ಲಿ ಕೇಳ್ತಾಳೆ ಅವಳು ........ ಅಕ್ಕಸಾಲಿ ಕಿವಿ ಚುಚ್ಚಿದರೇ ರು....ಚಿ, ಅಲ್ವೇನೇ ಗಂಗಿ?

ಗಂಗವ್ವ—ಬಯ್ಯೋಕೆ ಎಲ್ಲಿ ಎಡೆ ಸಿಕ್ಕತ್ತಂತ ಕಾದಿದ್ದೇನೋ ಅಲ್ಲಾ! ಸರಿಯಾಗೊಂದು ಮಾತಾಡೋಕೆ ಬಾರದಿದ್ರೂ ತಲೆಹರಟೆಗೇನೂ ಕಡಿಮೆ ಇಲ್ಲ!

ಚನ್ನ—........ಸಾಕು ಬಿಡೇ; ಗೊತ್ತದೆ ನಿನ್ನ ಜಂಭಾ. ಬೇಗ ಪ್ರಣತಿ ಹಚ್ಚಿಟ್ಟುಬಿಟ್ಟು ........ ಬಸವಣ್ಣನ ನೈವೇದ್ಯಕ್ಕೆ ಸಿದ್ಧಮಾಡು.

ಗಂಗವ್ವ—(ಅಣಕಿಸುವ ನೋಗಿನಲ್ಲಿ) .... ಬ .... ಬ .... ಬ್ಬಸವನಿಗೂ ಆಗಿದೆ; ....ಗೂ....ಗೂ....ಗ್ಗೂಳಿಗೂ ಆಗಿದೆ ನೈವೇದ್ಯಕ್ಕೆ! ನನ್ನ ಕೆಲ್ಸಾವ ನಿನ್ನಿಂದ ಹೇಳ್ಸ್ಕೊಂಡು ಮಾಡೋದಿಲ್ಲ ನಾನು.

ಚನ್ನ—(ಹತ್ತಿರಕ್ಕೆ ಬಂದು ದೈನ್ಯತೆಯಿಂದ) ಅದಿರಲೇ ಗಂಗೀ .... .... ಏನು ಮಾಡಿದ್ದೀ ಹೇಳು ಇಂದು ಹಬ್ಬದೂಟಕ್ಕೆ?

ಗಂಗವ್ವ—ಅದೆಂತಾ ಹಬ್ಬವೋ ಮಾರಾಯಾ? ದಿನವೂ ನಿನಗೆ ಹಬ್ಬವೇ ಅಲ್ಲಾ! ಮಾಡಿದ್ದೇನೆ....ರಾಗೀಮುದ್ದೆ-ಮೇಲ್ಕಾರಾಂಬ್ರಾ.

ಚನ್ನ—ಅಯ್ಯಯ್ಯಯ್ಯೋ....ಇಂದೂ ಅದೇ ಮುದ್ದೀ ಸಾರೇನೇ ? .... ತೆಗೀ ಆಚೆಗೆ.

ಗಂಗವ್ವ—ಗಂಟಲಲ್ಲಿ ಇಳಿಯೋದಿಲ್ಲಾ ಅಂತ ತೋರತ್ತೆ ಅಲ್ವೇ–ಮುದ್ದೆ !

ಚನ್ನ—........ಅಲ್ಲ ಕಾಣೆ–ಹೊನ್ನಾರ ಹೂಡೋದಂದ್ರೆ ದೊಡ್ಡ ಹಬ್ಬ ಅಲ್ವೇ ಮತ್ತೆ....ಇಂದು ಆನಂದಾಗಿ ನೇಗ್ಲು ಬಸವಣ್ಣಗಳನ್ನ ಪೂಜ್ಸಿ ಹೊನ್ನಾರ ಹೂಡೀ ಬಂದು ಸಂತೋಷದಿಂದ ಹಬ್ಬದೂಟಾ ಮಾಡ್ಬೇಕು....ಗಂಗೀ, ಸತ್ಯ ಹೇಳೇ....ಉಣ್ಣೋಕೇನ್ಮಾಡಿದ್ದೀಯೇ ಇಂದು ?

ಗಂಗವ್ವ—ಹೇಳಿದ್ನಲ್ಲಾ-ಮುದ್ದೇ ಕಾರಾಂಬ್ರಾ ಅಂತ.

ಚನ್ನ— ...ಹಾಂ....ಸುಳ್ಳೇಳ್ತೀ ನೀನು ; ನಾನೇ ಹೋಗಿ ನೋಡ್ತೇನಲ್ಲಾ ಒಳಕ್ಕೆ. (ಓಡುವನು)

ಗಂಗವ್ವ—ಹೋಗಿ ನೋಡ್ಬಾರ್ದು ಅಂತ ಯಾರಂದ್ರು ; ಬೇಕಾದ್ಹಾಗೆ ನೋಡ್ಕೋ ಹೋಗು — ಆದ್ರೆ ಸೋರೆ ಗೀರೆ ಒಡದುಹಾಕ್ಬೇಡಾ ಜಾಗ್ರತೆ. (ರಂವಗಲ್ಲಿ ಮುಗಿಸಿ ಪೂಜೆಯ ವ್ಯವಸ್ಥೆಯಲ್ಲಿ ತೊಡಗುವಳು).

ಚನ್ನ—(ಓಡಿಬಂದು) ಹಾಂ-ಹಾಂ....ಕಂಡೆ ಕಾಣೇ ........ಹುಗ್ಗಿ ಕೋಸಂಬ್ರಿ ಮಾಡಿಟ್ಟು ಸುಳ್ಳು ಹೇಳ್ತೀಯಲ್ಲೇ.

ಗಂಗವ್ವ—.... ಅಹಹಾ .... ಹುಗ್ಗೀ ಕೋಸಂಬ್ರಿ ತಿನ್ನೋಕೆ ಹ್ಯಾಂಗ್ ಬಾಯ್ಬಿಡತಿದ್ದೀ ! ಬೇಗ ಹೋಗಿ ಜಳ್ಕಾ ಮಾಡ್ಕೊಂಡು ಬಾ ; ಮತ್ತೆಲ್ಲಾ ಬರ್ತಾರೇ ಪೂಜೇಗೆ.

ಚನ್ನ—... ....ನಂದೇಟೊತ್ತೇ ಸ್ನಾನಾ .... ಒಂದೇ ಚಣಕ್ಕೆ ಬಂದುಬಿಟ್ಟೆ ನೋಡು. (ಓಡುವನು)

ಗಂಗವ್ವ—(ಪ್ರಣತೆ ದೀಪಗಳನ್ನು ಹಚ್ಚುತ್ತ, ಹಿಂದಿನಂತೆಯೇ)

ಸಂದೇಶವ ತಾ ತಂದಿಹನೂ | ಇಂತಪ ಭುವಿಯೊಳು ಸಾರಿಹನು ||
ಸಂತತ ರೈತ ಬಲಿದಾನಾ– | ತಂತುವಿನಿಂ ಜಗತಿನ ಪ್ರಾಣಾ || ೨ ||

(ಪಕ್ಕಕ್ಕೆ ಸರಿದು ನೋಡಿ) ಓಹೋ....ಅಪ್ಪಾ ಬಂದೇಬಿಟ್ರು; ನನ್ನ ಕೆಲ್ಸಾನೇ ಇನ್ನೂ ಉಳೀತಲ್ಲಾ ! (ಓಡುತ್ತೋಡುತ್ತ ಕೆಲಸ ಮುಗಿಸಲು ಪ್ರಯತ್ನಿಸುವಳು)

ಸಂಕಪ್ಪ—ಗಂಗಾ ! ಅಗೋ ಅಲ್ಲೊಂದು ಮಣೇ ಹಾಕು-ಅಯ್ಯನೋರಿಗೆ; ಮತ್ತೊಂದು ಚೊಂಬು ನೀರು ತಂದು ಇಲ್ಲೇ ಇಟ್ಟಿರು; ಸ್ವಾಮಿಯೋರು ಬತ್ತಲೇ ಮೊದಲವರ ಪಾದಾ ತೊಳ್ದು ಒಂದು ಶರಣಾರ್ತಿ ಹಾಕಿಬಿಡು.

ಗಂಗವ್ವ—ಆಗಲಪ್ಪಾ. (ಹಾಗೇ ವ್ಯವಸ್ಥೆ ಪಡಿಸುವಳು)

ಸಂಕಪ್ಪ—(ಒಬ್ಬೊಬ್ಬರನ್ನೇ ಸ್ವಾಗತಿಸುತ್ತಾ) ಬಾ, ಲಿಂಗಣ್ಣ....ಬಾ ಕೂತಕೋ; ಸಿದ್ದಣ್ಣ--ಬಾ ಈ ಕಡೆ--ನಿಂತುಕೊಳ್ಳೋದ್ಯಾಕೆ; ಏನೇ ಗಂಗಾ, ಆ ಹೆಣ್ಣುಮಕ್ಕಳನ್ನೆಲ್ಲಾ ಆಕಡೆ ಕೂಡ್ಸು. ಎಲ್ಲಿ, ಚನ್ನ ಎಲ್ಲಿ ? ಚನ್ನಾ !

ಚನ್ನ—ಓ ಬಂದೆ ಬಂದೆ. (ತಲೆ ಒರೆಸಿಕೊಳ್ಳುತ್ತ ಬರುವನು)

ಸಂಕಪ್ಪ—ಓಹೋ .... ಸ್ನಾನಾಯ್ತೇನು ? ಹಾಗಾದರೆ ಶಿವಪೂಜೆ ಒಂದು ಬೇಗ ತೀರಿಸಿಬಿಡು. ಅಯ್ಯನೋರ್ಬರ್ತಾರೆ ಈಗ.

ಲಿಂಗಪ್ಪ—ಹೌದಾ ಸಂಕಣ್ಣೋರೇ .... ಅಯ್ಯನೋರು ಹೊನ್ನಾರಿಗೆ ಲಗ್ನ ಯಾವುದಿಟ್ಟುಕೊಟ್ಟಿದ್ದಾರೆ--ನೆನಪದೇನು ?

ಸಂಕಪ್ಪ—ಸಿಂಹ ಅಂತ್ಲೋ ಮೀನೂ ಅಂತ್ಲೋ ಏನೋ ಅಂದ್ರಪ್ಪಾ. ಅದೆಲ್ಲಾ ನಮುಗ್ಯಾಂಗೆ ನೆಪ್ಪನ್ಯಾಗ ಇರುತ್ತೈತೇಳು; ಅಂತೂ ಸೂರ್ಯ ದೇವರು ಹುಟ್ಟುವಷ್ಟಕ್ಕೆ ಪೂಜೇಗೆಲ್ಲಾ ಸಿದ್ಧಮಾಡಿಡೂ ಅಂದ್ರು; ಅಷ್ಟೊಂದು ನೆಪ್ಪದೆ.

ಸಿದ್ದಪ್ಪ—ಏನು ಲಗ್ನವೋ....ಏನು ಮುಂಜಿಯೋ ನನಗಂತೂ ಅರ್ಥಾಗೋ ಕಿಲ್ಲಾ. ಕಳ್ದ ವರ್ಸಾನೂ ಈ ಲಗ್ನ-ಗಳಿಗೇ ಕಾಣದೇ ನಾವು ಹೊನ್ನಾರು ಹೂಡಿದ್ದ್ವೇನು ? ಆದ್ದೇನು ? ಹೊಟ್ಟೇಗರ್ಧ ಗಂಜೀನೂ ದೊರೀಲಿಲ್ಲ.

ಸಂಕಪ್ಪ—ಹೌದು ಕಾಣಣ್ಣಾ. ನಿಮಗಾದರೂ ಅರ್ಧ ಗಂಜೀ ಆಯ್ತು; ನಾನಿನ್ನೂ ಸರಕಾರದ ಕಂದಾಯಾನೇ ಕೊಡಲಿಲ್ಲ ಗೌಡ ಯಾವಾಗ ಮನೆ ಲಿಲಾವೀಗೆ ತರತಾನೋ ದೇವ್ರೇ ಬಲ್ಲ! ಈ ವರ್ಸಾನಾದ್ರೂ ಶಿವ ನಡ್ಸಿದ್ರೆ ಮನೆಯಾದ್ರೂ ಒಂದು ಉಳೀತಾ ಇತ್ತೋ ಏನೋ!

ಲಿಂಗಪ್ಪ—ಈ ವರ್ಷದ ಮಳೀ ಬೆಳೆ ಹ್ಯಾಂಗೈತಂತೇ? ಕೇಳಿದ್ರೇನು ಐನೋರ್ನ?

ಸಿದ್ದಪ್ಪ—ಅವರು ಏನಂತಾರೆ? ದೇವ್ರು ನಡ್ಸಿದ್ರೆ ಚೆನ್ನಾಗಾದೀತೂ ಅಂತ; ಎಲ್ಲಾ ಅಡ್ಡಗೋಡೇಮೇಲಿನ ದೀಪ! ನಮ್ಮದೃಷ್ಟದಲ್ಲಿ ಹ್ಯಾಂಗಯ್ತೋ, ಶಿವನ ಆಟ ಏನಯ್ತೋ ಕಂಡವರ್‍ಯಾರು?

ಸಂಕಪ್ಪ—ಅಗೋ ಅವ್ರೇ ಬಂದ್ರು. ಗಂಗವ್ವಾ, ಹೋಗೇ; ಅಯ್ಯನೋರ ಪಾದಾ ತೊಳಿ; ಮಣೇ ಹಾಕಿದ್ದಿಯೇನು ಅವರಿಗೆ ಕೂಡೋಕೆ? (ಅಯ್ಯನವರು ಪ್ರವೇಶಿಸುವರು; ಗಂಗವ್ವನು ಕಾಲು ತೊಳೆದು ನಮಸ್ಕರಿಸುವಳು) ಸ್ವಾಮಿಗಳೇ-ಬನ್ನಿ ಬನ್ನಿ, ಕೂಡಿ.

ಸಂಗಯ್ಯ—(ಬಂದು ಕುಳಿತುಕೊಳ್ಳುವರು) ಏನು, ಹೊತ್ತಾಯ್ತೇನು ನನ್ನಿಂದ? ಏನು, ಸಾಹುಕಾರ್‍ರು, ಗೌಡ್ರು ಯಾರೂ ಬಂದೇ ಇಲ್ಲವಲ್ಲಾ?

ಸಂಕಪ್ಪ—ಹೋಗಿ ಕರ್‍ದು ಬಂದೆ; 'ನೀನ್ಹೋಗು, ನಾವು ಬರ್‍ತೀವೆ ಹಿಂದ್ನಿಂದ ಅಂದ್ರು; ಬಂದಾರು ಈಗ.

ಸಿದ್ದಪ್ಪ—ಲಿಂಗಣ್ಣಾ, ಕೇಳಪ್ಪಾ ನಿನ್ನ ಅಹವಾಲನ್ನ ಅಯ್ಯನೋರಲ್ಲೀ; ಆಗಿನಿಂದ್ಲೂ ಒಂದೇಸಮ್ನೇ ಪೀಡ್ಸ್ತಿದ್ದೈಲ್ಲಾ ಸಂಕಪ್ಪನ್ನ.

ಲಿಂಗಪ್ಪ—ಸ್ವಾಮಿಗಳಾ! ಈ ವರ್ಷದ ಮಳೀ ಬೆಳೀ ಹ್ಯಾಂಗೈತಂತ ಕಂಡಿದ್ದಿರೇನು? ಏನು, ಕಳದ ವರ್ಷದ್ದೇ ಹಾಡೋ ಅಥವಾ ಏನಾದರೂ ಒಕ್ಕಲುಮಕ್ಕಳ ಪ್ರಾಣ ಉಳಿಯೋ ಹಾಂಗಿದಿಯೋ?

(ಪಕ್ಕಕ್ಕೆ ಸರಿದು ನೋಡಿ) ಓಹೋ....ಅಪ್ಪಾ ಬಂದೇಬಿಟ್ರು; ನನ್ನ ಕೆಲ್ಸಾನೇ ಇನ್ನೂ ಉಳೀತಲ್ಲಾ ! (ಓಡುತ್ತೋಡುತ್ತ ಕೆಲಸ ಮುಗಿಸಲು ಪ್ರಯತ್ನಿಸುವಳು)

ಸಂಕಪ್ಪ—ಗಂಗಾ ! ಅಗೋ ಅಲ್ಲೊಂದು ಮಣೇ ಹಾಕು-ಅಯ್ಯನೋರಿಗೆ; ಮತ್ತೊಂದು ಚೊಂಬು ನೀರು ತಂದು ಇಲ್ಲೇ ಇಟ್ಬಿರು; ಸ್ವಾಮಿಯೋರು ಬರ್‍ತಲೇ ಮೊದಲವರ ಪಾದಾ ತೊಳ್ದು ಒಂದು ಶರಣಾರ್ತಿ ಹಾಕಿಬಿಡು.

ಗಂಗವ್ವ—ಆಗಲಪ್ಪಾ. (ಹಾಗೇ ವ್ಯವಸ್ಥೆಪಡಿಸುವಳು)

ಸಂಕಪ್ಪ—(ಒಬ್ಬೊಬ್ಬರನ್ನೇ ಸ್ವಾಗತಿಸುತ್ತಾ) ಬಾ, ಲಿಂಗಣ್ಣ....ಬಾ ಕೂತಕೋ; ಸಿದ್ದಣ್ಣ--ಬಾ ಈ ಕಡೆ--ನಿಂತುಕೊಳ್ಳೋದ್ಯಾಕೆ; ಏನೇ ಗಂಗಾ, ಆ ಹೆಣ್ಣುಮಕ್ಕಳನ್ನೆಲ್ಲಾ ಆಕಡೆ ಕೂಡ್ಸು. ಎಲ್ಲಿ, ಚನ್ನ ಎಲ್ಲಿ ? ಚನ್ನಾ !

ಚನ್ನ—ಓ ಬಂದೆ ಬಂದೆ. (ತಲೆ ಒರೆಸಿಕೊಳ್ಳುತ್ತ ಬರುವನು)

ಸಂಕಪ್ಪ—ಓಹೋ .... ಸ್ನಾನಾಯ್ತೇನು ? ಹಾಗಾದರೆ ಶಿವಪೂಜೆ ಒಂದು ಬೇಗ ತೀರಿಸಿಬಿಡು. ಅಯ್ಯನೋರ್‍ಬರ್‍ತಾರೆ ಈಗ.

ಲಿಂಗಪ್ಪ—ಹೌದಾ ಸಂಕಣ್ಣೋರೇ .... ಅಯ್ಯನೋರು ಹೊನ್ನಾರಿಗೆ ಲಗ್ನ ಯಾವುದಿಟ್ಟುಕೊಟ್ಟಿದ್ದಾರೆ—ನೆನಪದೇನು ?

ಸಂಕಪ್ಪ—ಸಿಂಹ ಅಂತ್ಲೋ ಮೀನೂ ಅಂತ್ಲೋ ಏನೋ ಅಂದ್ರಪ್ಪಾ. ಅದೆಲ್ಲಾ ನಮುಗ್ಯಾಂಗೆ ನೆಪ್ಪನ್ಯಾಗ ಇರುತ್ತೈತೇಳು; ಅಂತೂ ಸೂರ್ಯ ದೇವರು ಹುಟ್ಟುವಷ್ಟಕ್ಕೆ ಪೂಜೇಗೆಲ್ಲಾ ಸಿದ್ಧಮಾಡಿಡೂ ಅಂದ್ರು; ಅಷ್ಟೊಂದು ನೆಪ್ಪದೆ.

ಸಿದ್ದಪ್ಪ—ಏನು ಲಗ್ನವೋ....ಏನು ಮುಂಜಿಯೋ ನನಗಂತೂ ಅರ್ಥಾಗೋ ಕಿಲ್ಲಾ. ಕಳ್ದ ವರ್ಸಾನೂ ಈ ಲಗ್ನ-ಗಳಿಗೇ ಕಾಣದೇ ನಾವು ಹೊನ್ನಾರು ಹೂಡಿದ್ದೇವೇನು ? ಆದ್ದೇನು ? ಹೊಟ್ಟೇಗರ್ಧ ಗಂಜೀನೂ ದೊರೀಲಿಲ್ಲ.

ಸಂಕಪ್ಪ—ಹೌದು ಕಾಣಣ್ಣಾ. ನಿಮಗಾದರೂ ಅರ್ಧ ಗಂಜೀ ಆಯ್ತು; ನಾನಿನ್ನೂ ಸರಕಾರದ ಕಂದಾಯಾನೇ ಕೊಡಲಿಲ್ಲ ಗೌಡ ಯಾವಾಗ ಮನೆ ಲಿಲಾವೀಗೆ ತರತಾನೋ ದೇವ್ರೇ ಬಲ್ಲ! ಈ ವರ್ಸಾನಾದ್ರೂ ಶಿವ ನಡ್ಸಿದ್ರೆ ಮನೆಯಾದ್ರೂ ಒಂದು ಉಳೀತಾ ಇತ್ತೋ ಏನೋ!

ಲಿಂಗಪ್ಪ—ಈ ವರ್ಷದ ಮಳೀ ಬೆಳೆ ಹ್ಯಾಂಗೈತಂತೇ? ಕೇಳಿದ್ರೇನು ಐನೋರ್ನ?

ಸಿದ್ದಪ್ಪ—ಅವರು ಏನಂತಾರೆ? ದೇವ್ರು ನಡ್ಸಿದ್ರೆ ಚೆನ್ನಾಗಾದೀತೂ ಅಂತ; ಎಲ್ಲಾ ಅಡ್ಡಗೋಡೇಮೇಲಿನ ದೀಪ! ನಮ್ಮದೃಷ್ಟದಲ್ಲಿ ಹ್ಯಾಂಗಯ್ತೋ, ಶಿವನ ಆಟ ಏನಯ್ತೋ ಕಂಡವರ್ಯಾರು?

ಸಂಕಪ್ಪ—ಅಗೋ ಅವ್ರೇ ಬಂದ್ರು. ಗಂಗವ್ವಾ, ಹೋಗೇ; ಅಯ್ಯನೋರ ಪಾದಾ ತೊಳಿ; ಮಣೇ ಹಾಕಿದ್ದಿಯೇನು ಅವರಿಗೆ ಕೂಡೋಕೆ? (ಅಯ್ಯನವರು ಪ್ರವೇಶಿಸುವರು; ಗಂಗವ್ವನು ಕಾಲು ತೊಳೆದು ನಮಸ್ಕರಿಸುವಳು) ಸ್ವಾಮಿಗಳೇ-ಬನ್ನಿ ಬನ್ನಿ, ಕೂಡಿ.

ಸಂಗಯ್ಯ—(ಬಂದು ಕುಳಿತುಕೊಳ್ಳುವರು) ಏನು, ಹೊತ್ತಾಯ್ತೇನು ನನ್ನಿಂದ? ಏನು, ಸಾಹುಕಾರ್ರು, ಗೌಡ್ರು ಯಾರೂ ಬಂದೇ ಇಲ್ಲವಲ್ಲಾ?

ಸಂಕಪ್ಪ—ಹೋಗಿ ಕರ್ದು ಬಂದೆ; 'ನೀನ್ಹೋಗು, ನಾವು ಬರ್ತೇವೆ ಹಿಂದ್ನಿಂದ ಅಂದ್ರು; ಬಂದಾರು ಈಗ.

ಸಿದ್ದಪ್ಪ—ಲಿಂಗಣ್ಣಾ, ಕೇಳಪ್ಪಾ ನಿನ್ನ ಅಹವಾಲನ್ನ ಅಯ್ಯನೋರಲ್ಲೀ; ಆಗಿನಿಂದ್ಲೂ ಒಂದೇಸವ್ನೇ ಪೀಡ್ಸಿತ್ತಿದ್ಯಲ್ಲಾ ಸಂಕಪ್ಪನ್ನ.

ಲಿಂಗಪ್ಪ—ಸ್ವಾಮಿಗಳಾ! ಈ ವರ್ಷದ ಮಳೀ ಬೆಳೀ ಹ್ಯಾಂಗೈತಂತ ಕಂಡಿದ್ದಿರೇನು? ಏನು, ಕಳದ ವರ್ಷದ್ದೇ ಹಾಡೋ ಅಥವಾ ಏನಾದರೂ ಒಕ್ಕಲುಮಕ್ಕಳ ಪ್ರಾಣ ಉಳಿಯೋ ಹಾಂಗಿದಿಯೋ?

ಸಂಗಯ್ಯ—ಈ ವರ್ಷ ಹಾಂಗಲ್ಲಾ ಕಣಪ್ಪಾ....ಮಳೀ ಯೋಗ ಬಹಳ ಚೆನ್ನಾಗಿದೆ; ಬೆಳಿ ರೂಪ್ಯಾಗೆ ಹದಿನಾರಾಣೆ. ಕಳ್ದ ವರ್ಷದ ಕಡತಾ ಈ ವರ್ಷ ತುಂಬಿ ಬರೋದ್ರಲ್ಲಿ ಏನೇನೂ ಸಂಶಯ ಇಲ್ಲಾ ಅಂತ ಕಾಣಸತಾ ಇದೆ. ಇದ್ರ ಮೇಲೆ ಪರಮೇಶ್ವರನ ಇಚ್ಛೆ....ರೈತರ ನಸೀಬು !

ಸಿದ್ದಪ್ಪ—ರೈತರ ನಸೀಬು ಉಂಟೇ ಉಂಟಲ್ಲ....ಅನುಭವಿಸೋದು ; ಅತ್ತ ಸಾಯೋ ಹಾಂಗಿಲ್ಲಾ--ಇತ್ತ ಬದುಕೋ ಹಾಂಗಿಲ್ಲಾ. ಹರಕು ಬಟ್ಟೆ-ಅರ್ಧ ಹೊಟ್ಟೇ – ಇದು ನಮಗೆ ಕಾದಿಟ್ಟಿರೋದು.

ಸಂಗಯ್ಯ—ಸಿದ್ದಪ್ಪಾ ! ಹಾಂಗಂತ ದುಡೀದೇ ಇದ್ರೆ ಆಗತ್ತೇನ್ರಿಯೇ ? ದುಡಿಯೋದು ನಿಮ್ಮ ಭಾಗ್ಯ. ನಿಮ್ಮಿಂದ್ಲೇ ಜಗತ್ತು ಕಾಣಪ್ಪಾ. ಹಾಂ.... ಪೂಜೇಗೆ ಪ್ರಾರಂಭಮಾಡೋಣವೇನಿನ್ನು ? ಎಲ್ಲಾ ಬರ್‍ತಾರೆ ಅಷ್ಟಕ್ಕೆ ; ಇಲ್ಲವಾದರೆ ಲಗ್ನ ಮೀರಿಹೋಗತ್ತೆ.

ಎಲ್ಲರೂ—ಹಾಂ-ಪ್ರಾರಂಭಿಸಿಬಿಡ್ರಿ. (ಸಂಗಯ್ಯನವರು ಪೂಜೆಯನ್ನು ಪ್ರಾರಂಭಿಸುವರು. ನೇಗಿಲು ಎತ್ತುಗಳಿಗೆ ಹೆಣ್ಣುಮಕ್ಕಳು ಆರತಿ ಎತ್ತುವರು.)

ಸಂಗಯ್ಯ—ಎಲ್ಲಿ-ಬಸವನೀಗೆ ನೈವೇದ್ಯ ತಂದು ಇಡ್ರಿ (ಗಂಗೆಯು ತಂದು ಇಡುವಳು. ಎಲ್ಲರಿಗೂ ಫಲಾಹಾರ ಹಂಚಲ್ಪಡುವುದು.)

ಸಂಗಯ್ಯ—...............ಹಾಂ ಏನ್ರವ್ವಾ ! ಸಂಕಪ್ಪನೀಗಷ್ಟು ಅಕ್ಷತೆ ಇಟ್ಟು ಆರತಿ ಬೆಳಗಿಬಿಡ್ರಿ.

(ಹೆಣ್ಣುಮಕ್ಕಳು ಅಕ್ಷತೆ ಇಟ್ಟು)

ರಾಗ: ಮಿಶ್ರಮಾಂಡ್ ಖವಾಲಿ

ಆರತಿ ಜೀವಾಧಾರಾ-ಭಾರತಿ ಪ್ರೇಮಸುಪುತ್ರಾ |
ಆರತಿ ಲೋಕರ ಪಂಚಪ್ರಾಣಾ-ಕರ್ಮಯೋಗಿಯೇ
ಶಾಂತಾಕಾರಾ ‖ ಧೃ ‖

ವರಸೇವೆಯ ಘನದೀಕ್ಷೆಯಪೊಂದೀ–ಸಿರುತ ಪೊರೆದೆ
ಜಗವನೆ ವೀರಾ ||
ನಿಷ್ಕಾಮೀ–ಬಹುಪ್ರೇಮೀ ಬಿರುದಿನ ಸ್ವಾಮೀ
ಮಂಗಲ ಜಯ ಜಗಕ್ಷೇಮೀ || ೩ ||

ಸಂಗಯ್ಯ—ಏನು ಸಂಕಪ್ಪಾ ! ಒಳ್ಳೇ ಶುಭ ಮುಹೂರ್ತ ಇದು ; ಗುರುಗಳಿಗೆ ನಮಸ್ಕಾರಮಾಡಿ ಬಸವಣ್ಣನಿಗೆ ಕೈಮುಗಿದು ನೇಗಿಲು ತೆಗೆದುಕೋ. ( ಸಂಕಪ್ಪನು ನಮಸ್ಕರಿಸಿ ನೇಗಲಿಗೆ ಕೈಕೊಡುವುದರಲ್ಲಿರುವನು. ಅಷ್ಟರಲ್ಲಿ ಗೌಡ್ರ ಕಲ್ಲಪ್ಪನವರೂ ಸಾಹುಕಾರ್ ಗಿರಿಯಪ್ಪನವರೂ ಮತ್ತು ತಲವಾರ ತಿಮ್ಮನೂ ಪ್ರವೇಶಿಸುವರು.

ಸಂಗಯ್ಯ—ಓಹೋಹೋಹೋ-ಗೌಡ್ರು ಸಾಹುಕಾರ್ರೂ ಸಮಯಕ್ಕೆ ಸರಿಯಾಗಿ ಬಂದುಬಿಟ್ಟರಲ್ಲಾ. ಸಂಕಣ್ಣಾ-ಗೌಡ್ರಿಗೂ ಸಾಹುಕಾರ್ರಿಗೂ ನಮಸ್ಕಾರಮಾಡಿ ಅಪ್ಪಣೆ ಪಡೆದೇ ನೇಗಿಲಿಗೆ ಕೈಕೊಡಪ್ಪಾ ಎಷ್ಟಂದರೂ ಊರಧಣಿ ! ಊರತಾಯಿ !! ಇಬ್ಬರೂ ಸೇರಿಯೇ ಬಂದುಬಿಟ್ಟಿದ್ದಾರೆ ; ಏನೋ ಶುಭಮುಹೂರ್ತ ಕಾಣಯ್ಯ.

ಸಂಕಪ್ಪ—( ಇಬ್ಬರಿಗೂ ನಮಸ್ಕರಿಸಿ ) ಹೊನ್ನಾರ ಹೂಡ್ತೇನಿ ಬುದ್ಧೀ

ಗೌಡ—ಸಾಹುಕಾರ್ರೇ ಸಂಕಪ್ಪನಿಗೆ ಹೇಳಿಬಿಡ್ರಿ–ನಾವು ಬಂದಿರುವ ವಿಚಾರ. ಮೊದ್ಲು ಕಂದಾಯದ ವ್ಯವಸ್ಥೆ ಮಾಡಿ ಆಮೇಲೆ ಬೇಕಾದ್ದು ಹೂಡೀಲಂತೆ ಅವನು.

ಗಿರಿಯಪ್ಪ—ಸಂಕಣ್ಣಾ, ಗೌಡ್ರು ನಿನ್ನ ಮೇಲೆ ಜಪ್ತುವಾರಂಟು ತಂದಿದ್ದಾರೆ ಕಂದಾಯಬಾಕೀಗೆ ; ನೀನೀಗ ಮೊದ್ಲು ಹಣದ ವ್ಯವಸ್ಥೆಪಡಿಸದೇ ಇದ್ರೆ ನಿನ್ನ ಎಲ್ಲಾ ಸ್ವತ್ತೂ ಜಫ್ತಾಗತ್ತೆ ; ಏನು ಹೇಳ್ತೀ ಹೇಳವರಿಗೆ.

ಸಂಕಪ್ಪ—ನಾ ಏನು ಹೇಳ್ಳೀ ನನ್ನೊಡೆಯಾ ? ಕಂದಾಯ ಕೊಡ್ಯೋದ್ನಿಜ. ಅದ್ಕೆ ನಾನು ಗೌಡ್ರಲ್ಲಿ ಮುದ್ದತ್ಕೊಡ್ಸಬೇಕೂ ಅಂತ ಕೇಳ್ಕೊಂಡಿದ್ದೆ ; ನನ್ನ ವಿಚಾರೆಲ್ಲಾ ತಮಗೆ ಗೊತ್ತದೆ. ಇನ್ನೊಂದ್ನಾಲ್ಕು ದಿನಾ ಅವಕಾಶ ಕೊಟ್ರೆ ಇದ್ದಬದ್ದ ಸಾಮಾನಾದ್ರೂ ಮಾರಾಟಮಾಡಿ ಕಟ್ಟತೇನೆ ಹಣ.

ಗೌಡ—ಇವನ್ನೇ ನಾಲ್ಕು ದಿನಾ ಮೊದಲು ಮಾಡ್ಬೇಕಿತ್ತು! ಈಗೇನ್ಮಾಡಲಿಕ್ಕೆ ಬರುತ್ತೆ ?

ಸಂಕಪ್ಪ—ಮಾಡ್ತಿದ್ದೆ ಗೌಡ್ರೆ. ಆದ್ರೆ ನೀವು ಮುದ್ದತ್ತ ಕೊಡಸತೀರಿ ಅಂತ ಸುಮ್ಮನಾದ.

ಲಿಂಗಪ್ಪ—ಹೌದು ಗೌಡ್ರೆ, ಹೇಳ್ತಾನಲ್ಲಾ ಸಂಕಪ್ಪಾ ಸ್ವಲ್ಪ ಅವಕಾಶ ಕೊಡ್ರೀ ಅಂತ–ಹಾಗೆ ಮಾಡ್ರಿ. ನೋಡಿ, ಇಂದವ್ನು ಹೊನ್ನಾರಿಗೆ ಹೊರ್‍ಟ್ಕೂತಿದಾನೆ. ; ಪ್ರಥಮ ಹೂಟೀ ದಿವ್ಸ; ಇಂಥಾ ಸಮಯ ನೀವಾತನ ಕುತ್ತಿಗೆ ಹಿಸುಕಿದ್ರೆ ಅವನೆಲ್ಲಿಂದ ತರಬೇಕು ಹೇಳ್ರಿ.

ಸಿದ್ದಪ್ಪ—ಇದ್ರಮೇಲೆ ಕಳ್ದವರ್ಷದ ಪೈರು ನಿಮಗೆ ಗೊತ್ತೇಇದೆ ಹ್ಯಾಗಾಗಿದೆ ಅಂತ; ಏನೋ ಇದ್ದವರೇನೋ ಕೊಟ್ರು–ಸಾಲವೋ ಕಡವೋ ಮಾಡ್ಕೊಂಡು. ಎಲ್ರಿಗೂ ಒಂದೇ ದೊಣ್ಣೆ ಆದರೆ ಹ್ಯಾಂಗ್ ನಡೀಬೇಕ್ರಪ್ಪಾ.

ಗೌಡ—ಆದನ್ನೆಲ್ಲಾ ನೀವು ನನ್ನ ಕೇಳೋದಲ್ಲ; ಸಾಹೇಬ್ರು ಬಂದಲ್ಲಿ ಹೇಳ್ಕೋಬೇಕಿತ್ತು ; ಹೇಳ್ಳಿಕ್ಕೇನಯ್ಯಾ ? ನೀವೆಲ್ಲರೂ ಹೇಳತಕ್ಕವರೇ ನನಗೆ. ನಾನೇನು ಕಟ್ಕಾ ಅಂತ ತಿಳಿಬೇಡ್ರಿ ನೀವು; ಪರರ ಸುಖ ಕಷ್ಟ. ರೈತರ ಗೋಳು ನನ್ಗೂ ಗೊತ್ತಾಗುತ್ತೆ ಆದರೆ ಇದು ಸರಕಾರದ ಕೆಲ್ಸ. ಇವ್ನ ಸಹಾಯಕ್ಕೆ ಹೋಗಿ ಕೊನ್ಗೆ ನನ್ನ ತಲೇಗೆ ತಂದ್ಕೋಬೇಕಾದೀತು. ಆದ್ರಿಂದ ಏನೂ ಮಾಡೋ ಹಂಗಿಲ್ಲ. ಮೇಲಿನವರ ಆಜ್ಞೆಯನ್ನು ನಡ್ಸಲೇ ಬೇಕಾಗುತ್ತೆ ನಾನು.

ಸಂಗಯ್ಯ—ಅದೂ ತಪ್ಪಲ್ಲ ಅನ್ನಿ. ಆದ್ರೆ ಈ ಸುಮುಹೂರ್ತದಲ್ಲಿ ನೀವು ಆತನಿಗೆ ಕಣ್ಣೀರು ತರ್ಸೋದು ಸರಿ ಅಂತ ನನ್ಗೂ ತೋರೋದಿಲ್ಲ ಈಗ ತಾವು ತಂದ ವಿಘ್ನ ಅವನೀಗೆ ಮಾತ್ರವೇ ಅಲ್ಲ; ಇಡೀ ಗ್ರಾಮಕ್ಕೇ ಅಂತ ತಿಳೀಬೇಕಾಗುತ್ತೆ.

ಗಿರಿಯಪ್ಪ—ಹೌದು ಗೌಡ್ರೆ, ಏನಾದರೂ ಪ್ರಯತ್ನಮಾಡ್ರಿ; ಒಬ್ಬನ ದೆಸೀಂದ ಇಡೀಗ್ರಾಮಕ್ಕೇ ತೊಂದ್ರೆಯಾಗಬಾರದು. (ಕಣ್ಣು ಮಿಟುಕಿಸುವನು.)

ಗೌಡ—(ಉಸುರ್ಗರೆದು) ನಿಮಗೂ ನಾನು ಹೇಳ್ಬೇಕೇನು ಸಾಹುಕಾರ್ರೇ ಕಾನೂನಿನ ವಿಚಾರ; ಹಾಗಾದ್ರೆ ಇಷ್ಟೇಮಾಡ್ರಿ; ಈ ಹಣ ಏನು ಮಹತ್ತರವಾದ್ದಲ್ಲ ತಮಗೆ. ಒರೇ ಇಪ್ಪತ್ತೈದೂರು ರೂಪ್ಯಾ ಚಿಲ್ರೆ; ತಾವೇ ಅದನ್ನಷ್ಟುಕೊಟ್ಟು ಬೇಕಾದರೆ ಆತನಿಂದ ಪ್ರೊನೋಟೋ-ಕಾಗದವೋ ಏನಾದರೂ ಬರ್ಸಿಕೊಳ್ಳಿ-ಎಲ್ಲವೂ ಬಗೆಹರಿದಂತಾಗುತ್ತಲ್ಲಾ.

ಗಿರಿಯಪ್ಪ—ಏನು ನಾನು ಹೇಳಿದ್ದಕ್ಕೆ ನನ್ಗೇ ತೋರ್ರ್ಸಿದಿರಲ್ಲಾ ತಿರುಮಂತ್ರಾ. ಏನೋ ಸಂಕಪ್ಪ ಬಂದು ವತ್ತಾಯ ಮಾಡಿದ್ದಕ್ಕೆ ನಾನು ಬಂದೆ ಇಲ್ಲಿ ಪೂಜೆಗೆ; ಇದೂ ತಪ್ಪೇನು?

ಸಿದ್ದಪ್ಪ—ತಪ್ಪಲ್ಲಾ-ಎಲ್ಲಾ ಒಳ್ಳೇದಕ್ಕೆ ಸಾಹುಕಾರ್ರೇ. ಈಗ ಬಂದಾಯ್ತಲ್ಲಾ ಹ್ಯಾಗಿದ್ರೂ ಸಂಕಪ್ಪ ತಮ್ಮ ಆಶ್ರಯದಲ್ಲೇ ಇದ್ದ ಕುಳಾ; ತಮ್ಮ ಹೊಲದಲ್ಲೇ ಮೊದ್ಲಿಂದ್ಲೂ ಜೀತಾ ಮಾಡಿಕೊಂಡಿದ್ದ ಬಡಪಾಯಿ; ಆದ್ರಿಂದ ಒಂದು ಸಹಾಯ ಮಾಡಿಬಿಡ್ರಿ. ಸಂಕಪ್ಪನೇನು ತಮ್ಮ ಹಣವನ್ನು ನುಂಗಿಕೊಂಡು ಹೋಗುವುದು ಅಷ್ಟರಲ್ಲೇ ಇದೆ.

ಗಿರಿಯಪ್ಪ—ಏನ್ರಪ್ಪಾ, ಏನ ಹೇಳ್ತೀರಿ ನೀವೆಲ್ಲಾ? ಹಿಂದೆ ಕೊಟ್ಟ ಹಣಕ್ಕೇ ಇನ್ನೂ ಒಂದು ಗತಿ ಗೋತ್ರ ಇಲ್ಲಾ; ಮನೇ ನನ್ನ ಹೆಸರೀಗೆ ಬರ್ದಹಾಕಿದ್ದಾನೆ. ಅದನ್ನ ಬಿಡ್ಸಿಕೊಳ್ಳೋದ್ಯಾವಾಗ್ಲೋ; ಬಡ್ಡೀ ಸಹಾ ಇನ್ನೂ ಕೊಟ್ಟಿಲ್ಲಾ; ಮೊನ್ನೇ ಒಂದು ಚೀಲ ಕಾಳ್ತಂದಾ .... ಆದರದ್ದೂ ರೊಕ್ಕಾ ಇಲ್ಲಾ; ಇನ್ನೂ ಹೀಗೇ ಕೊಡ್ತಾ ಹೋದ್ರೆ ಮುಂದೇನಂತೆ?

ಸಂಕಪ್ಪ—ಎಲ್ಲಾ ಕೊಡ್ತೇನೆ ಸಾಹುಕಾರ್ರೇ; ಮನೇ ಹೊದ್ರೆ ಹೊಲಾ ಒಂದು ಚೂರುಂಟಲ್ಲ, ಅದನ್ನೇ ಮಾರಿ ಕೊಡ್ತೇನೆ. ನಿಮಗ್ಯಾಕೆ ಹೆದರಿಕೆ? ಸದ್ಯ ಬಡ್ವನ ಮರ್ಯಾದೆ ಒಂದುಳಸಿರೀ.... ನೋಟು ಬರ್ಸಿಕೊಡ್ತೇನೆ.

ಗೌಡ—ಏನು ಗಿರಿಯಪ್ಪನವರೇ, ಒಪ್ಪಿಗೆಯೇನು ತಮ್ಮದು ಹಣ ಕೊಡಲಿಕ್ಕೆ? ಇದ್ರೆ ಹೇಳಿ-ಇಲ್ಲವಾದರೆ ನನ್ನ ಕೆಲ್ಸ ನಾನ್ಮಾಡ್ತೇನೆ. ಏ ತಲವಾರಾ,

ಹಿಡಿಯೋ ಆ ಹೋಂಗಳನ್ನ. ಬಿಚ್ಚಿ ಈಚಿಗೆ ತಗೋ. ಮತ್ತು ಮನೆ ಯೊಳಗೆ ಹೋಗಿ ಏನು ಸಾಮಾನಿದೇ ಅಂತ ನೋಡು.

ತಲವಾರ—ಆಗಲಿ ಬುದ್ದೀ. (ಹೋಗಿ ಎತ್ತಿಗೆ ಕೈಹಾಕುವನು)

ಸಂಕಪ್ಪ—ಗಿರಿಯಣ್ಣೋರೇ! ಈ ನನ್ನ ಅವಸ್ಥೆಯನ್ನ ನೀವೇ ನೋಡ್ತೀರೇನು? ಬಡವ್ನ ಮ್ಯಾಲೆ ತಮ್ಗೆ ಕರ್ಣೆ ಬರೋದಿಲ್ವೆ? ನೋಡಿ ಗಿರಿಯಣ್ಣನವ್ರೇ ನಿಮ್ಮ ಸಂಪತ್ತು-ಈ ನಿಮ್ಮ ಐಶ್ವರ್ಯ ಬೆಳೆದದ್ದು ನನ್ನ-ನಮ್ಮ ಹಿರಿಯರ-ನನ್ನ ಒಡನಾಡೀ ರೈತಬಂಧುಗಳ ಬೆವರ ಹನಿಯಿಂದ, ನಿಮ್ಮ ಹಿರಿಯರ ಬಾಯಾರಿಕೆ ತಣಿದದ್ದು ನಮ್ಮ ರಕ್ತಧಾರೆಯಿಂದ. ನಿಮ್ಮ ಹಸಿವು ಹಿಂಗಿದ್ದು ನಮ್ಮ ರಟ್ಟೆಯ ಕಸುವಿನಿಂದ. ಅಣ್ಣಾ - ಇನ್ನೂ ನನ್ಗೆ ಜ್ಞಾಪ್ಕ ಇದೆ; ನಿಮ್ಮನ್ನ ನಿಮ್ಮ ಚಿಕ್ಕಂದಿನಲ್ಲಿ ನಾನು ನನ್ನ ತೋಳಿನಲ್ಲಿ ಆಡ್ಸಿ ಸಾಕಿದ್ದೇನೆ. ನನ್ನ-ನನ್ನ ಹಿರಿಯರ ಆಶ್ರಯದಾತರೆಂದು, ಬಾಳಿನ ನೆರಳೆಂದು ನಿಮ್ಮ ಬೆನ್ನ ಛಾಯೆಯಂತಿದ್ದು ಪಹರೇ ಮಾಡಿದ್ದೇನೆ. ಅದೊಂದು ಸಮಯ ನೀವು ರೋಗದಿಂದ ಹಾಸಿಗೆ ಹಿಡಿದು ಮಲಗಿದ್ದಾಗ ಕಣ್ಣಿಗೆ ಎಣ್ಣೆ ಹಾಕಿ ಕಾದಿದ್ದೆ. ನಿಮ್ಮ ಆರೋಗ್ಯಕ್ಕಾಗಿ-ನಿಮ್ಮ ಶ್ರೇಯಸ್ಸಿಗಾಗಿ ಹಗಲೂ ಇರುಳೂ ಕಣ್ಣೀರು ಸುರ್ಸಿ ದೇವರಲ್ಲಿ ಮೊರೆ ಇಟ್ಟಿದ್ದೇನೆ; ಅಣ್ಣಾ, ಇಂದು ನೀವೇ ನನ್ನ ಕೈಬಿಡ್ತೀರೇನು?

ಚನ್ನ—....ಗಿರಿಯಣ್ಣೋರೇ .... ಸ್ವಲ್ಪ ಬಡವರಲ್ಲಿ ದಯೆ ತೋರ್ಸಿ .... ಹಣಕ್ಕಾಕಿ ತಾವು ಚಿಂತಿಸ್ಬೇಡಿ. ನನ್ನ ದೇಹದಲ್ಲಿ ಒಂದೇ ಹನಿ ರಕ್ತವಿರುವುದಾದ್ರೆ ಮಾವನಲ್ಲದಿದ್ರೂ ನಾನಾದರೂ ತೀರಿಸುತ್ತೇನೆ-ನಿಮ್ಮ ಋಣವನ್ನ; ದಯವಿಟ್ಟು ಈಗ ನಮ್ಮರ್‍ಯಾದೆ ಉಳಿಸಿರಿ.

ಗಂಗವ್ವ—ಹೌದು ಸಾಹುಕಾರ್ರೇ-ಈ ವರ್ಷ ನಮ್ದೇ ಅಲ್ದೆ ಬೇರೆಯದ್ರದ್ದೂ ಒಂದೆರಡು ಹೊಲಾ ಕೇಣಿ ಮಾಡಿಕೊಂಡಿದ್ದೇವೆ ನಾವು. ದೇವ್ರು ನಡ್ಸಿದ್ರೆ ಈ ವರ್ಷದ ಕೊಯ್ಲು ತೀರತ್ಲೇ ಬಡ್ಡೀ ಸಮೇತ ತಮ್ಮ ಹಣ ಮುಟ್ಟಿಸ್ತೇವೆ. ಸ್ವಲ್ಪ ದೊಡ್ಮನ್ಸು ಮಾಡ್ರೀಗ.

ಗೌಡ—ಹೂಂ-ಏನು ಸಾಹುಕಾರ್ರೇ! ಈಗ ತಮ್ಮ ಅಭಿಪ್ರಾಯ ಏನು ಹೇಳಿ ಬಿಡ್ರಿ; ಇನ್ನು ಸುಮ್ಮನೇ ಕಾಯಲಿಕ್ಕೆ ನನ್ಗೆ ಅವಕಾಶಾ ಇಲ್ಲಾ.

ಗಿರಿಯಪ್ಪ—(ಉಸುರ್ಗರೆದು) ಇನ್ನು ಇಲ್ಲಾ ಅಂತ ಅಂದ್ರೆ ಆಗತ್ತೆಯೇ? ಏನಪ್ಪಾ ಸಂಕಪ್ಪಾ, ನಿಮ್ಮ ಗೋಳು ನೋಡಿ-ಅದ್ರಲ್ಲೂ ಈ ಗಂಗವ್ವನ ಕಣ್ಣೀರು ನೋಡಿ ನಾಸ್ತಿ ಅನ್ನಲಿಕ್ಕೆ ನನ್ಗೆ ನಾಲಿಗೆಯೇ ಬಾರದು. ಇಗೋ! ಹಣ ಈಗ ಕೊಡ್ತೇನೆ. ಮೊದಲೊಂದು ಪ್ರೋನೋಟ್ ಬರ್ಸಿ ಕೊಟ್ಟುಬಿಡು; ಒಪ್ಪಿಗಿಯೇನು ಇದಕ್ಕೆ?

ಸಂಕಪ್ಪ—ಆಗಲೀ ಗಿರಿಯಣ್ಣೋರೇ, ಅಡ್ಡೇನು? ಗೌಡ್ರೆ! ದಯವಿಟ್ಟು ಒಂದು ಕಾಗದಾನಾದ್ರೂ ಬರ್ದುಕೊಡ್ತೀರಾ?

ಗೌಡ—ಕಾಗ್ದ! ನಾನು ಬೇಡ; ಅಗೋ, ಸಿದ್ದಪ್ಪ ಇದ್ದಾನೆ ಅಲ್ಲಿ; ಅವ್ನು ಬರೀಲಿ; ಸಾಕ್ಷಿ ಬೇಕಾದರೆ ನಾನು ಹಾಕ್ತೇನೆ. ಕಾಗ್ದ ಸ್ಟಾಂಪು ಬೇಕಾದ್ರೆ ನನ್ನಲ್ಲೇ ಇದೆ, ಕೊಡ್ತೇನೆ. ಸಿದ್ದಣ್ಣಾ, ಬನ್ನಿ ಇದೊಂದು ವ್ಯವಹಾರ ಮುಗ್ಸೀಬಿಡುವ ಬೇಗ.

ಸಿದ್ದಪ್ಪ—ಆಗಲೀ ಗೌಡ್ರೇ. (ಬರೆಯುತೊಡಗುವನು) ಹಾಂ.... ನೋಟು ಎಷ್ಟಕ್ಕೆ ಅಂದ್ರಿ?

ಸಂಕಪ್ಪ—ಗಿರಿಯಣ್ಣೋರೇ! ಈ ವರ್ಷಾ ಎರ್ಡು ಹೊಲಾ ಕೇಣೀಗೆ ಹೆಚ್ಚು ಮಾಡಿಕೊಂಡೇನೆ; ಬೀಜ್ದ ಕಾಳಷ್ಟು ಕೊಂಡ್ಕೋಬೇಕು; ಸಾಲದ್ದಕ್ಕೆ ಒಂದು ಎತ್ತೂ ಸ್ವಲ್ಪ ಕುಂಟ್ತಾ ಇದೆ, ಅದನ್ನೊಂದು ಬದ್ಲೀ ಮಾಡಿ ಬೇರೆ ತರಬೇಕು ಅಂತಿದ್ದೇನೆ. ಆದ್ರಿಂದ ಒಂದು ನೂರು ರೂಪ್ಯಾ ಹೆಚ್ಚಿಗೆ ಕೊಟ್ಟದ್ರೆ ಅನ್ಕೂಲ ಆಗ್ತಾ ಇತ್ತು.

ಗಿರಿಯಪ್ಪ—ನನ್ನಿಂದ ತಂದ ಕಾಳು ಮರ್ತೇಬಿಟ್ಟೆಯಲ್ಲಾ ಸಂಕಪ್ಪಾ ಒಂದು ಚೀಲ; ಅದನ್ನೂ ಸೇರ್ಸಿ ರೂಪ್ಯಾ ನೂರೈವತ್ತೇ ತಕೋ. ಆದ್ರೆ ಒಂದು ವಿಚಾರ, ನೋಟು ಮಾತ್ರ ಮುನ್ನೂರಕ್ಕೇ ಆಗಬೇಕು. ನೀನು ಹಣ ವಾಯ್ದೇಗೆ ಸರಿಯಾಗಿ ತಂದುಕೊಟ್ರೇ ಈ ನೂರೈವತ್ತಕ್ಕೇ ನಿನ್ನ

ನೋಟು ವಾಪ್ಸು -- ತಪ್ಪಿದರೆ ಮಾತ್ರ ನೋಟು ಮುನ್ನೂರಕ್ಕೇ ನಿಜರ; ಆದೀತೇನು ?

ಸಂಕಪ್ಪ—ತಮ್ಮ ಸಂತೋಷ ಸಾಹುಕಾರ್‍ರೇ ! ಸಿದ್ದಣ್ಣಾ -- ನೋಟು ಮುನ್ನೂರಕ್ಕೇ ಬರೀರಿ.

ಗೌಡ—ಏನೋ ಸಾಹುಕಾರ್‍ರು ಮನಸ್ಸುಮಾಡಿ ಒಡವನ ಮರ್ಯಾದೆ ಒಂದುಳಿಸಿದ್ರಿ. ಇಲ್ಲವಾದರೆ ನನ್ಗೆ ಮಾತ್ರ ಬಹು ಕಷ್ಟಕ್ಕೆ ಬಂದಿತ್ತು. ಉಭಯ ಸಂಕಟದಲ್ಲಿ ನನ್ನ ಎದೆಯೇ ಆರಿಹೋಗಿತ್ತು.

ಗಿರಿಯಪ್ಪ—ಏನೋ ಹಿಂದಿನಿಂದ್ಲೂ ಆಶ್ರಯದಲ್ಲಿದ್ದವನು, ಆದ್ರಿಂದ್ಲೇ ನನ್ಗೆ ಏನು ಹೇಳ್ಳಿಕ್ಕೂ ಬಾಯೇ ಬರಲಿಲ್ಲ.

ಸಿದ್ದಪ್ಪ—ಸಾಹುಕಾರ್‍ರೇ, ಕೇಳಿ--ನೋಟು ಓದಿ ಹೇಳ್ತೀನೆ.

ಗಿರಿಯಪ್ಪ—ನನ್ಗೇನೂ ಬೇಕಾಗಿಲ್ಲ; ಸಂಕಪ್ಪನಿಗೇ ಓದಿ ಹೇಳಿಬಿಡು. ಸಂಕಪ್ಪಾ! ಕೇಳಿಕೋ ನೋಟಿನ ಒಕ್ಕಣೆಯನ್ನ.

ಸಂಕಪ್ಪ—ನನಗ್ಯಾತಕ್ಕೊಡೆಯಾ ಅದರ ಗೊಡವೆ ? ಅದರಲ್ಲೇನು ಗೊತ್ತಾಗತ್ತೆ ನನ್ಗೇ ? ತಾವೇನು ಮೋಸಗಾರ್‍ರೇ ! ಬೇಡ ಸಿದ್ದಣ್ಣ - ಮುಂದಿನ ಕೆಲ್ಸ ಎಲ್ಲಾ ಮುಗಿಸಿಬಿಡ್ರಿ.

ಸಿದ್ದಪ್ಪ—ಹಾಗಾದ್ರೆ ಇಲ್ಲಿ ಬಾ ; ನಿನ್ನದೊಂದು ಹೆಬ್ಬೆಟ್ಟಿನ ಗುರುತು ಒತ್ತಿಬಿಡು ಇಲ್ಲಿ. (ಒತ್ತುವನು) ಈಗ ಸಾಕ್ಷಿಯಾರದ್ದು ?

ಗಿರಿಯಪ್ಪ—ಒಂದು ಗೌಡರದ್ದಿರಲಿ ; ಇನ್ನೊಂದು ಸ್ವಾಮಿಗಳದ್ದಿರಲಿ. (ಇಬ್ಬರೂ ಸಾಕ್ಷಿ ಹಾಕುವರು.)

ಸಿದ್ದಪ್ಪ—ಹಾಂ. ನನ್ನ ಕೆಲ್ಸ ಎಲ್ಲಾ ಮುಗೀತು. ಬರಹ ಸಹಾ ಮುಗ್ಸಿಬಿಟ್ಟೆ. ಇಗೋ ಸಂಕಪ್ಪಾ, ಇದನ್ನ ಸಾಹುಕಾರ್‍ರ ಹತ್ರ ಕೊಡು. (ಕೊಡುವನು.)

ಗಿರಿಯಪ್ಪ—(ಹಣ ಜೇಬಿನಿಂದ ಎಣಿಸಿಕೊಡುತ್ತ) ಇಗೋ ಲೆಕ್ಕಮಾಡಿಕೋ. ೨ ಇಪ್ಪತ್ತೂರು ರೂಪ್ಯಾ ಹದಿಮೂರಾಣೆಯನ್ನ ಗೌಡ್ನ ಕೈಯಲ್ಲಿ ಕೊಡ್ತೇನೆ; ಮತ್ತೆ ನನ್ನ ಕಾಳಿನ ಕ್ರಯ ನಾನು ಮುರಕೊಂಡಿದ್ದೇನೆ. ಸರಿಯಾಗಿ ನೋಡ್ಕೋ.

ಸಂಕಪ್ಪ—ಗಂಗವ್ವಾ, ಇದನ್ನ ಒಳಕ್ಕೆ ತೆಗೆದಿಡವ್ವಾ.

ಗೌಡ—ಇನ್ನು ನಡೆಯಲೀ ಸಂಕಣ್ಣ -- ನಿಮ್ಮ ಹೊನ್ನಾರ ಹೂಟಿ.

ಸಂಕಪ್ಪ—ಆಗಲೀ ಗೌಡ್ರೆ. (ಪುನಃ ಎಲ್ಲರಿಗೂ ನಮಸ್ಕರಿಸಿ ಕಣ್ಣೀರು ಒರಸಿಕೊಂಡು ನೇಗಿಲಿಗೆ ಕೈಕೊಡುವನು; ಚನ್ನನು ಎತ್ತುಗಳನ್ನು ಹಿಡಿದುಕೊಳ್ಳುವನು. ಎಲ್ಲರೂ ಹೊರಟು ಅವರನ್ನೇ ಹಿಂಬಾಲಿಸುವರು.)

[ತೆರೆ ಬೀಳುವುದು]

## ನೋಟ ೨

[ಶಿವಗ್ರಾಮದ ಒಂದು ಬೀದಿ. ಗೌಡರೂ ಸಾಹುಕಾರರೂ ಪ್ರವೇಶಿಸುವರು. ಹಿಂದಿನಿಂದಲೇ ತಲವಾರನೂ ಬರುವನು.]

ಗಿರಿಯಪ್ಪ—ಭಲಾ ಗೌಡ್ರೆ! ನಿಮ್ಮಭಿನಯ ಮಾತ್ರ ಬಹು ಚೆನ್ನಾಗಿತ್ತು. ಅಷ್ಟು ಚೆನ್ನಾಗಿ ನೀವು ನಟನೆಯನ್ನು ಮಾಡದೇ ಇದ್ದಿದ್ರೆ ಇಂದಿನ ನಾಟ್ಕವೇ ಹಾಳಾಗಿ ಹೋಗ್ತಾ ಇತ್ತು. ಎಷ್ಟೆಂದರೂ ಪಳಗಿದ ಕೈಯಲ್ಲವೇ; ಕೇಳಬೇಕೆ!

ಗೌಡ—ನಟನೆಯಲ್ಲಿ ಯಾರಿಗೆ ಯಾರು ಕಡಿಮೆ? ನೀವೇನಾದರೂ ನನಗಿಂತ ಕಡಿಮೇ ಅಭಿನಯಿಸಿದಿರೇನು? ಹ್ಯಾಗೇ ಇರಲಿ – ಅಂತೂ ನಾಟಕವೊಂದು ಯಶಸ್ವಿಯಾಗಿ ನೆರವೇರಿತು. ಎಲ್ಲಿ ನಾನು ನಮ್ಮ ಒಳಸಂಚನ್ನ ಸಿದ್ದಣ್ಣ ತಿಳೀತಾನೋ ಅಂತ ಅಂಜಿಕೊಂಡಿದ್ದೆ. ಆದ್ರೆ ಅವನೂ ಕೂಡ ನಮ್ಮ ಮರ್ಮವನ್ನ ಅರಿಯಲಾರದೇಹೋದ.

ತಲವಾರ—(ಸ್ವ) ಮನೇ ಮುರಿಯೋದ್ರಲ್ಲಿ ಒಬ್ಬರೀಗಿಂತ ಒಬ್ಬರು ಮೇಲು. ಇವರು ಕಾಲಿಟ್ಟ ಮನೆ ಉದ್ಧಾರವೇ.

ಗಿರಿಯಪ್ಪ—ಒಂದೊವ್ಮೆ ತಿಳ್ದಿದ್ರೇನಾಗತಿತ್ತಂತೆ ಸಿದ್ದಪ್ಪಾ; ಅವನು ಪುಟ್ ಲಾಯರಿ ಹಾಗಿಪ್ರೂ! ಈ ಒಳವಕೀಲರ ಕೈ ಒಂದು ಬೆಚ್ಚಗಾಗಿಬಿಟ್ರೆ ಅವರು ನಾವು ಕರ್ದಂತೆ ಬರ್ತಾರೆ. ಇರಲೀ ಗೌಡ್ರೆ ಇದೋ ತಗೊಳ್ಳಿ ತವ್ಮು ಸಹಾಯದ ಪ್ರತಿಫಲ. ಇಷ್ಟಕ್ಕೇ ಮುಗೀತಂತ ತಿಳೀಬ್ಯಾಡ್ರಿ ಇದು; ಇನ್ನೂ ನಿಮ್ಮಿಂದ ಆಗತಕ್ಕ ಕೆಲ್ಸವೂ ಇದೆ, ಕೊಡತಕ್ಕ ಸಂಭಾವನೆಯೂ ಇದೆ.

ತಲವಾರ—(ಸ್ವ) ಹಾಂ....ಇವರಿಗೆ ಬೇಕಾದ್ದೂ ಅದೇ. ನಿನ್ನೆಯೇ ಸಂಣ ಗೌಡರದ್ದು ಬೆಂಗಳೂರಿಂದ ಹಣಕ್ಕೆ ಕಾಗ್ದಾ ಬಂದಿತ್ತು. ಆಯ್ತಲ್ಲಾ ಕೆಲ್ಸ.

ಗೌಡ—ಸಂಕಪ್ನ ಕಸೂ ಇನ್ನು ಅಡಗಿತು. ಆತನ ಹೊಲಾ ಮನೇ ಎಲ್ಲಾ ನಿಮ್ಮ ಸ್ವಾಧೀನವಾದಂತೆಯೇ ಇನ್ನು. ಈ ಮುನ್ನೂರರ ಜತೇಗೇ ಇನ್ನೂ ಮುನ್ನೂರೋ ನಾನ್ನೂರಕ್ಕೋ ನಾಳೆ ಆತ ನಿಮ್ಮಲ್ಲೇ ಸಾಲಕ್ಕೆ ಬರ್ತಾನೆ. ಆತನಿಗೀಗ ಹಣದ ಅಗತ್ಯ ಇದೆ.

ಗಿರಿಯಪ್ಪ—ಇನ್ನು ಮುನ್ನೂರೇ ಯಾಕೆ – ಸಾವಿರಗಟ್ಟಲೆ ಕೇಳಿದರೂ ಕೊಡಲಿಕ್ಕೆ ಸಿದ್ಧನೇ ಇದ್ದೇನೆ ನಾನು ಸಂಕಪ್ಪನೀಗೆ. ಆದ್ರೆ ನನ್ನ ಮನಸ್ಸಿನಂತೆ ಮಾತ್ರ ಕಾರ್ಯ ನಡೀಬೇಕು.

ಗೌಡ—ಆ ಆಸ್ತಿಯ ಬೆಲೆಯೂ ಅಷ್ಟೇನೇ; ಸುಮಾರು ಒಂದೂವರೆ ಸಾವಿರ. ಹಣವಿದ್ದರೆ ನಾನೇ ಅದನ್ನ ತೆಗೆದುಕೊಂಡುಬಿಡಬೇಕೂ ಅಂತಿದ್ದೆ.

ತಲವಾರ—(ಸ್ವ) ಹೊನ್ರಪ್ಪೋ, ಅದ್ಕೇ ನಾನೂ ಅನ್ನೋದು - ಈ ಶ್ರೀಮಂತ್ರಲ್ಲಿ ಸಾಲಕ್ಕೆ ಹೋಗಬೇಡ್ರೀ ಅಂತ; ಇದು ಕಬ್ಬಿನ ಗಾಣಕ್ಕೆ ಕೈ ಕೊಟ್ಟ್ಹಾಂಗೆ!

ಗಿರಿಯಪ್ಪ—ಗೌಡ್ರೇ, ನೀವು ಸರಿಯಾಗಿ ಸಂಕಪ್ಪನ ಆಸ್ತಿಯ ಬೆಲೆ ಮಾಡಿಲ್ಲ; ಅದು ಒಂದೆರಡು ಸಾವಿರವೇ ಯಾಕೆ, ಲಕ್ಷಾವಧಿಯೂ ಬಾಳಬಹುದು.

ಗೌಡ—ಇಲ್ಲ, ಇದು ನಿಮ್ಮ ತಪ್ಪು ಭಾವನೆ. ಅಷ್ಟೆಲ್ಲಿ ಬಾಳಬೇಕು ಗಿರಿಯಪ್ಪನವರೇ -- ಅವನ ಹರಕು ಹೊಲ ? ಹೆಚ್ಚೆಂದರೆ ಒಂದೂವರೆ ಸಾವಿರ ಅಷ್ಟೆ !

ತಲವಾರ—(ಲಲಲಲಲಾ ! ಏನು ಕರಾರುವಾಕಾ ಲೆಕ್ಕ ಇಟ್ಟೆದ್ದಾನೆ ನಮ್ಮ ಗೌಡ ! ಪ್ರತೀ ಮನೇ ಹೆಂಚು, ರಿಪೀಸ್, ತೊಲೆ, ಎಲ್ಲಾದರ ಲೆಕ್ಕವೂ ಬಾಯಲ್ಲೇ ಇದೆ ಮಹರಾಯನೀಗೆ.

ಗಿರಿಯಪ್ಪ—ಪಟೇಲರೇ, ನೀವು ಹೇಳುತ್ತಿರುವ ಆ ಸಂಕಪ್ಪನ ನಿರ್ಜೀವ ಹೊಲ ಮನೆಗಾಗಿ ನಾನು ಬಾಯ್ದೆರೆದು ಕುಳಿತಿಲ್ಲವೀಗ. ನಾನು ಬಯಸುತ್ತಿರುವುದು ಆತನ ಜೀವನೀಯ ಆಸ್ತಿ–ಸಜೀವ ಪುತ್ಥಳಿ–ಗಂಗೆಯನ್ನ.

ತಲವಾರ—(ಸ್ವ) ಬಪ್ಪರೇ ಗಂಡೇ! ಇಂವ ನಮ್ಮ ಗೌಡನಿಗಿಂತಲೂ ವ್ಯಾಗಿದ್ದಾನಲ್ಲಪ್ಪಾ ; ಎಲ್ಲಿಂದ ಎಲ್ಲೀವರೆಗೆ ಕಣ್ಣಿಟ್ಟೆದ್ದಾನೇ ಲೌಡೀ....ಗಂಡ (ಬಾಯಿ ಮುಚ್ಚಿಕೊಳ್ಳುವನು)

ಗೌಡ—ಸಾಹುಕಾರರೇ ! ನಿಜವಾಗಿಯೂ ನಿಮ್ಮ ಎಣಿಕೆಗೆ ನಾನು ಸೋತೆ. ಹೌದು, ನೀವು ಸಾಧ್ಯವಾದಷ್ಟು ಜಾಗ್ರತೆ ಅವಳನ್ನ ನಿಮ್ಮವಳನ್ನಾಗಿ ಮಾಡಿಕೊಳ್ಳದೇ ಇದ್ರೆ ಮುಂದೆ ಅದು ಸಾಧ್ಯವಿಲ್ಲ. ಮುಂದಿನ ಮದುವೇ ಸುಗ್ಗಿಯಲ್ಲೇ ಸಂಕಪ್ಪ ಮಗಳನ್ನ ತನ್ನ ಸೋದರಳಿಯ ಚನ್ನಪ್ಪನಿಗೆ ಕೊಟ್ಟು ಲಗ್ನಾ ಮಾಡಬೇಕೂ ಅಂತಿದ್ದಾ. ಆದ್ರಿಂದ ಈ ಸುಸಂದರ್ಭವನ್ನ ನೀವು ಕಳ್ಕೊಳ್ಳಬ್ಯಾಡ್ರಿ ; ಸಹಾಯಕ್ಕೆ ನಾನಿದ್ದೇನೆ.

ತಲವಾರ—(ಸ್ವ) ವ್ಹಾ........ವ್ಹಾ........ಎಂಥಾ ಪುಣ್ಯದ ಕೆಲ್ಸಾ ; ಇದುವರೆಗಿನ ಪಾಪದ ಗುಡೀಗೆ ಇದೊಂದು ಕಳಸ ಇಟ್ಟ್ಹಾಂಗೆ. ಹೌದು, ನೀವಿದನ್ನ ಮಾಡ್ಲೇಬೇಕ್ರಪ್ಪಾ.

ಗಿರಿಯಪ್ಪ—ನಿಮ್ಮಲ್ಲಿ ನನಗೆ ಪೂರ್ಣ ವಿಶ್ವಾಸ ಇದೆ. ಆಗಲೀ, ಬರ್ತೀನಿ ನಾನು. (ಹೋಗುವನು)

ಗೌಡ—ತಿಮ್ಮಾ, ಹೋಗೋ ಸಂಕಪ್ಪ ಹತ್ರ ಒಂದು ಹತ್ತು ರೂಪ್ಯಾ ಕೈಗಡ ಕೊಡಲಿಕ್ಕೆ ಹೇಳಿದೆ ನಾನೂ ಅಂತ ಅನ್ನು .... ಅಂವ ಎತ್ತು ತಕ್ಕೊಳ್ಳು ವಾಗ ಕೊಡೋಣವಂತೆ ವಾಪ್ಸು.

ತಲವಾರ—ಅಷ್ಟೇನು ಅಗತ್ಯ ಗೌಡರೇ ಹಣದ್ದು ? ಸಾಹುಕಾರ್ರು ಈಗಲೇ ಕೊಟ್ರಲ್ಲಾ....ಏನೋ ನೋಟು....ಸಾಲದೇನು ಅದು ?

ಗೌಡ—ಏನು ಕೊಡ್ತಾರೋ ಸಾಹುಕಾರರು ! ಕೊಟ್ರಂತೆ ಕೊಟ್ರು ; ಮತ್ತೆ ಬೀದೀಲೆಲ್ಲಾ ಹೀಂಗೆ ಹೇಳ್ತಾ ಹೋಗಬೇಡ ಎಲ್ಲಾದ್ರೂ ! ಸಾಹು ಕಾರ್ರು ಕೊಟ್ಟದ್ದು ಮನೆಗಂದಾಯ ಬಾಕಿಯಾದ್ದು.

ತಲವಾರ—ಅದೇನು ಹೇಳ್ತೀರಿ ಗೌಡ್ರಾ ? ಮನೆಗಂದಾಯ ಕಳ್ದತಿಂಗಳಲ್ಲೇ ಬೇಬಾಕಿಯಾಗಿತ್ತು.

ಗೌಡ—ಏ ಬುದ್ಧಿವಂತ ! ಸಾಕೋ ನಿನ್ನ ಅಧಿಕಪ್ರಸಂಗ ! ಹೋಗಿ ಹೇಳಿದಷ್ಟು ಕೆಲಸ ಮಾಡಿಕೊಂಡು ಬಾ ಹೋಗು. ಕೇಳ್ತೀನು ? (ಹೋಗುವನು)

ತಲವಾರ—ಆಗಲಿ ಗೌಡ್ರ. (ಸ್ವ) ಏನು ಮಹರಾಯರೋ ಇವರು ! ಇವ ರೀಗೆ ಯಾವ ಕಡೆಯಿಂದ ಬಂದ್ರೂ ಸಾಕಾಗೋಹಂಗಿಲ್ಲ. ಆಗಲೇ ಸಾಹುಕಾರ್ರಿಂದಷ್ಟು ಎಳ್ದ್ರು, ಈಗ ಸಂಕಪ್ಪನೋರಿಗಷ್ಟು ಇಳಿಸುವಾ ಹೊಂಡಕ್ಕೇ ಅಂತ ಯೋಚನೇಲಿದ್ದಾರೆ....ಅಂತೂ ಈ ಒಕ್ಕಲಿಗರು ಮಾಡಿದ್ದೆಲ್ಲಾ ಬೇರೆಯವರು ತಿನ್ನಲಿಕ್ಕೇ ಆಗಿಹೋಯ್ತೇನೋ ! ಈಗ ಸಂಕಪ್ನೋರನಾದರೂ ಯೇನಂತ ಕೇಳ್ಬಪ್ಪಾ ಹಣವನ್ನ ? ಕೊಡ್ತಾರೇ ಅವ್ರುನೂ ನಾನು ಕೇಳಿದ ಕೂಡ್ಲೇ ; ಆದರೆ ಅದರ ವಸೂಲಿಗೆ ಮಾತ್ರ ಭಂಡಿಚಕ್ರವೇ ! ದೇವರ ಮುಡುಪಿಗೇ ಕೈಕೊಡೋ ಇವರು ಇನ್ನು ಈ ಒಕ್ಕಲಿಗರನ್ನ ಬಿಟ್ಟಾರೇನು ? ಏನು ಬಂತಪ್ಪಾ ಕಾಲ ! ಈ ಹಾಳು

ಒಕ್ಕಲಿಗರದ್ದೂ -- ಉಣ್ಣೋಹಾಂಗಿಲ್ಲ, ಉಡೋಹಾಂಗಿಲ್ಲ ; ಹೊಟ್ಟೆ ಹರಕು–ಬಟ್ಟೆ ಹರಕು, ದುಡದೂ ದುಡದೂ ದೇಹ ಮಾತ್ರ ಮುರುಕು; ಇಂಥವ್ರಲ್ಲೂ ಮೋಸ್ವೇ ? ಕೆಳಗೀ ಬಿನ್ವಗಳ ಕಾಟ, ಮೇಲಿದನ್ನೆಲ್ಲಾ ನೋಡ್ತಿರೋ ದೇವರೀಗೊಂದಾಟ ! ಹೂಂ - ನಡೀಲಿ, ನಡೀಲಿ .... ಈ ಅತ್ತೋರು ನಕ್ಕೋರು, ಎಲ್ಲರೂ ಒಂದಿನ ಹೋಗೋರೇ, ಯಾರೂ ಉಳಿಯೋಹಾಂಗಿಲ್ಲ. ಉಳಿಯೋದ್ಯಾವುದು ? ಪಾಪ ಮತ್ತೆ ಪುಣ್ಯ ! ಈ ಎರಡೇ .... ಹೂಂ .... (ಹೋಗುವನು)

[ತೆರೆ ಬೀಳುವುದು]

## ನೋಟ ೩

[ಚನ್ನಯ್ಯನು ಹೊಲದ ತಪ್ಪಲಿನ ಹಳ್ಳದಲ್ಲಿ ಬಟ್ಟೆ ತೊಳೆಯುತ್ತಲಿರುವನು. ಗಂಗೆಯು ಮರದ ಮರೆಯಲ್ಲಿ ಅವಿತುಕೊಂಡಿರುವಳು.

ಚನ್ನಯ್ಯ—ಹೊಲದ ಕೆಲ್ಸದಲ್ಲಿ ಬಟ್ಟೆ ವ್ರೈ .... ಎಲ್ಲಾ ಗಬ್ಬೆದ್ದುಹೋಯ್ತು. ತೊಳೀಲಿಕ್ಕೂ ಅವಕಾಶಾ ಇಲ್ಲಾ........ಇಂದು ಒಂದು ಕ್ಷಣ ಬಿಡೂ ಮಾಡ್ಕೊಂಡು ಇತ್ತ ಬಂದ್ರೆ ಸೀರೂ ಗಬ್ಬೇ.... ಏನು ಮಾಡಲೀ .... ಇಲ್ಲೇ ಅಷ್ಟು ಹಿಂಡಿಕೊಂಡು ಹೋಗಿಬಿಡ್ತೇನೆ. (ಎಂದು ತನ್ನಷ್ಟಕ್ಕೇ ಹಾಡುತ್ತಾ ಬಟ್ಟೆ ತೊಳೆದು ಮೇಲೆ ಬಿಸಿಲಲ್ಲಿ ಹರಡುವನು. ಗಂಗವ್ವನು ನಿಧಾನ ವಾಗಿ ಬಂದು ಆ ಬಟ್ಟೆಯನ್ನೆಲ್ಲ ಮುದ್ದೆಮಾಡಿ ಕೆಡವಿ ಹೋಗಿ ಅಡಗಿಕೊಳ್ಳುವಳು. ಚನ್ನಯ್ಯನು ಮತ್ತೊಂದು ಬಟ್ಟೆ ತೊಳೆದು ಒಣಗಿಸಲು ಬರುವಾಗ ಮೊದಲಿನ ಬಟ್ಟೆ ಕೆಳಕ್ಕೆ ಬಿದ್ದಿರುವುದನ್ನು ನೋಡಿ)

ಚನ್ನಯ್ಯ—ಹಾಂ-ಇದೇನಿದು ? ತೊಳದು ಆರಿಸಿದ ಅರಿವೆಯನ್ನ ಹೀಗೆ ಮುದ್ದೆ ಮಾಡಿ ಧೂಳಲ್ಲಿ ಉರುಳಿಸಿದೋರು ಯಾರಿದು ? ( ಸುತ್ತಲೂ ನೋಡಿ ತೊಳದುತಂದ ಬಟ್ಟೆಯನ್ನು ಆರಿಸಿ ಮೊದಲಿನದನ್ನು ತೊಳೆಯಲು ತೆಗೆದುಕೊಂಡು ಹೋಗುವನು; ಗಂಗೆಯು ಪುನಃ ಹಾಗೇ ಮಾಡುವಳು. ಚನ್ನನು ತಿರುಗಿ

ಬಂದು ನೋಡಿ) ಎಲಾ ಇವರಾ ! ಯಾರದ್ದು ಕೆಲ್ಸಾ ಇದು.... ಗ್ರಾಚಾರ ಗೀಚಾರ ಕಾಡತ್ತೇನು ? (ಪುನಃ ಮೊದಲಿನಂತೆಯೇ ಆಗಲು) ಥೂ ! ಹೋಕಲುಗೇಡಿಗಳಾ ! ನಿಮ್ಮ ಜಂಭಾ ಮುಗದಿಲ್ಲೇನು ? ಹೊಟ್ಟೆ ಉರೀತಾಯಿದೇ ನನ್ನದೂ. ನಿನ್ನೆ ತಂದ ಹೊಸ ಬಟ್ಟೇನೂ ಮೈಲ್ ಮಾಡಿಬಿಟ್ಟಿರೀ ! ಬಂದೆ ಬಂದೆ, ಎಲ್ಲಿದ್ದೀರೀ, ನೋಡ್ತೇನೆ ನಾನು. (ಎಂದು ಹುಡುಕುತ್ತಾ ಹೋಗುವನು ; ಗಂಗೆಯು ನಿಧಾನವಾಗಿ ಬಂದು ಬಟ್ಟೆ ತೊಳೆಯುತ್ತ)

ಗಂಗವ್ವ—ಈ ಗಂಡಸರೀಗೆ ತಮ್ಮ ತಮ್ಮ ಅರವೀ ಪರವೀನೂ ಇಲ್ಲ ; ಮಾಸಲು ಮಾಡಿ ಎಲ್ಲೆಲ್ಲೊ ಗದಬಿಡ್ತಾರೆ. ಯಾವ ಹಳ್ಳದ ಮೂಲೇಲಿ ನೋಡ್ದರೂ ಇವರದ್ದೇ ಅರಿವೆ.

ಚನ್ನ—(ನಿಧಾನವಾಗಿ ಬಂದು ಆಲೈಸುತ್ತಾ) ಹಾಂ-ಹಾಂ, ಯಾರು, ನೀನೇನು ಗಂಗೀ ?

ಗಂಗವ್ವ—(ಕಟೆದು ನಿಂತು) ಹಾಂ .. ನಾನು ಗಂಗೀ .... ಈಗ ಗೊತ್ತಾಯ್ತೇನು ನನ್ನ ಹೆಸರು ?

ಚನ್ನ—ನೀನು ಗಂಗೀ ಹೌದೇ. ಸತ್ಯ ಹೇಳು ... ಆ ಬಟ್ಟೇನಲ್ಲಿ ಕೆಳಗೆ ಕೆಡವಿದವರು ಯಾರು ಹೇಳು ? ನಂಗೇನು ತಿಳಿಯೋದಿಲ್ಲಾ ಅಂತ ತಿಳಿದಿಯೇನು ?

ಗಂಗವ್ವ—ಎಂತಾ ಬಟ್ಟಿ-ಎಲ್ಲಿ ? ನಂಗೊತ್ತಿಲ್ಲಪ್ಪಾ !

ಚನ್ನಯ್ಯ—ಗೊತ್ತಿಲ್ಲಾ.... ನಿಜವಾಗಿಯೂ ?

ಗಂಗವ್ವ—ಹಾಂ-ನಿಜವಾಗಿಯೂ.... ಸತ್ಯಕ್ಕೂ. ಮತ್ತೇನು ?

ಚನ್ನ—ನೋಡೇ ಗಂಗೀ ಇಲ್ಲಿ .... ನಾನು ಅರಿವೇ ತೊಳತೊಳದು ಇಲ್ಲಿ ಆರ್ಸೋದು ... ಯಾರೋ ಅದನ್ನ ಮಣ್ಣಲ್ಲಿ ಕೆಡವಿ ಗಬ್ಬ ಎಬ್ಸಿಬಿಟ್ಟಿದ್ದಾರೆ ನೋಡು.

ಗಂಗವ್ವ—ಹಾಂ-ಹಾಂ....ಎಂಥಾ ನೀಚರು. ಆಗಲಿ, ಹಾಗಾದರೆ ಈಗ ಹೀಗೆ ಮಾಡು : ನೀನು ಬಟ್ಟೆ ತೊಳ್ದು ಹಾಕ್ತಾ ಇರು, ನಾನು ಇಲ್ಲೇ ದಂಡೆ ಮೇಲೆ ನಿಂತು ನೋಡ್ತಾಯಿರ್ತೇನೆ-ಯಾರು ನಿನ್ನ ಅರಿವೇ ಮುಟ್ಟತಾರೇ ಅಂತ.

ಚನ್ನ—ಹಾಂ-ಹಾಗೇ ಮಾಡು. (ಬಟ್ಟೆ ತೊಳೆದು ಆರಿಸಿ ಇನ್ನೊಂದನ್ನು ತೊಳೆಯುವಾಗ ಗಂಗವ್ವನು ಪುನಃ ಹಾಗೇ ಮಾಡುವಳು; ಚನ್ನಪ್ಪನು ಮೇಲಕ್ಕೆ ಬಂದು ನೋಡಿ) ಇಗಾ ಮತ್ತೇ....ನೋಡಿದಿಯೇನೇ ಗಂಗೀ ಇಲ್ಲಿ, ನೀನೆಲ್ಲಿ ನೋಡ್ತಾ ಇದ್ದೆ ?

ಗಂಗವ್ವ—ಇಲ್ಲೇ ನೋಡ್ತಾ ಇದ್ದೇ ಸುತ್ತಲೂ....ಆಂ....ಚನ್ನಾ....ಹಾಂಗಾದರೆ ಇದೂ ಮನುಷ್ಯರ ಕೆಲ್ಸ ಅಲ್ಲಕಣೋ, ಯಾವುದಾದರೂ ದೆವ್ವ-ಭೂತಗಳ ಆಟವ್ವೋ ಯೇನೋ .... ಹೋಗೋಣಪ್ಪಾ ನಾವು ಇಲ್ಲಿಂದ - ಇನ್ನೆಲ್ಲಾದ್ರೂ.

ಚನ್ನ—ಯಾಕ್ ಹೆದ್ರತೀ ಗಂಗೀ ! ತಾಳು, ಇನ್ನೊವ್ಮೆ ನೋಡೋಣಾ ಅಂತೆ....ನಂಗೆ ಈ....ದೆವ್ವ ಭೂತಗಳನ್ನ ಬಹೂ ದಿನದಿಂದ—ನೋಡಬೇಕಂತ ಆಶೆ ಇದೆ....ತಾಳು. (ಪುನಃ ಬಟ್ಟೆ ತೊಳೆಯುತ್ತ ಓರೆಗಣ್ಣಿನಿಂದ ಹಿಂದಕ್ಕೆ ನೋಡುತ್ತಲಿರುವನು. ಗಂಗೆಯು ಅದನ್ನು ಕೆಳಕ್ಕೆ ಕೆಡವಬೇಕೆಂದು ಹವಣಿಸುತ್ತಿರುವಷ್ಟರಲ್ಲಿ ಚನ್ನಪ್ಪನು ಹಿಡಿದು) ಹಾಂ--ಇಗಾ ಇಲ್ಲಿದೆ ದೆವ್ವ .... ಇದು ಹೆಣ್ಣು ದೆವ್ವ ಕಣೇ....ಮೋಹಿನೀ.

ಗಂಗವ್ವ—ಚನ್ನಾ-ಬಿಡೋ, ಬಿಡೋ ನನ್ನ ಕೈಯನ್ನು. ನಿನ್ನ ತಂಟೀಗೆ ಬರೋದಿಲ್ಲ ಕಣೋ ನಾನಿನ್ನು.

## ಡಾಯಲಾಗ್

ಗಂಗವ್ವ—ಬಿಡು ಬಿಡು ಬೇಡುವೆ ನಾ ಕರವಾ - ನಡೆ ಛೇ ನೀ |
ಚನ್ನ—ತಡೆ ತಡೆ ರಮಣಿ ನಿ - ಬೆಡಗಿನ ತರುಣಿ ನಿ - ಬಿಡೆ ಬಿಡೆ
ನಾ ಕರವಾ | ನಡೆ ಬಾ ಬಾ ||

ಗಂಗವ್ವ—ಛೀ ಮೂಢ ಕೆಡುವೇ – ದುರ್ನಾಮ ಪಡೆವೇ ||
ಚನ್ನ—ನಾ ಬಿಡೇ ಕರ ಲಲನೇ - |
ಗಂಗವ್ವ—ಪಿತನೊಳುಸುರುವೆ |
ಚನ್ನ—ಜತೆಯಲೆ ಬರುವೆ |
ಗಂಗವ್ವ—ನಡೆ ಛೀ ನೀ |
ಚನ್ನ—ನಡೆ ನೀ ಬಾ ||

ಗಂಗವ್ವ—ಇದೇನೋ ಚನ್ನಾ – ಬಿಡೋ ನನ್ನ ಕೈಯನ್ನ. ಹೆಣ್ಣುಮಕ್ಕಳ ಕೈ ಹಿಡಿಯುವೆಯಲ್ಲೋ!

ಚನ್ನ—ಬಿಡೋದಿಲ್ಲ .... ನೀನ್ಯಾಕೆ ನನ್ನ ಅರಿವೇ....ಗಬ್ಬಮಾಡ್ದೆ....ಕಳ್ಳಾಟ ಆಡ್ತೀಯೇನು ?

ಗಂಗವ್ವ—ಇಲ್ಲ, ಇನ್ನು ಮಾಡೋದಿಲ್ಲ. ನನ್ನ ಕೈಯನ್ನ ಬಿಟ್ಟುಬಿಡು.

ಚನ್ನ—ಊ-ಹೂಂ. ..ಎಷ್ಟುಕ್ಕೂ ಬಿಡೋದಿಲ್ಲ .... ನಿನ್ನನ್ನ ಹೀಂಗೆ ಎಳಕೊಂಡು ಹೋಗಿ ಮಾವನ ಹತ್ತಿರ ಬಿಡ್ತೇನೆ ನೋಡು.

ಗಂಗವ್ವ—ಬಿಡೋದಿಲ್ಲಾ ? (ಚನ್ನಪ್ಪನು ಇಲ್ಲಾ ಎಂದು ತಲೆಯಾಡಿಸುವನು) ಯಾಕೆ ಬಿಡೋದಿಲ್ಲವೋ ನೋಡ್ತೇನೆ ನಾನು. (ಚನ್ನನ ಕೈಯನ್ನು ಚೆನ್ನಾಗಿ ಕಚ್ಚುವಳು; ಚನ್ನನು ಕೈ ಬಿಡುತ್ತಲೇ ನಗುತ್ತ ಓಡಿಹೋಗುವಳು.)

ಚನ್ನ—(ಕೈಬಿಟ್ಟು ಕೊಡವುತ್ತ) ಲೇ! ಕೆಟ್ಟ ಮುಸುಡೀ....ಎಲ್ಲಿಗೆ ಓಡ್ತಿಯೋ ನೋಡ್ತೇನೆ ನಾನು. (ಗಂಗವ್ವನು ನಗುತ್ತ ಮುಂದಿನಿಂದ ಓಡುವಳು; ಹಿಂದಿನಿಂದ ಚನ್ನ ಓಡಿಯೋಡಿ ಹಿಡಿಯಲು ಸಾಧ್ಯವಾಗದಿರಲು ಒಂದು ಕಲ್ಲನ್ನೆತ್ತಿ) ನೋಡು .... ಗಂಗವ್ವಾ .... ಹೊಡೀತೇನೆ ಕಲ್ಲು .... ಬೇಗ ನಿಲ್ಲು. (ಮತ್ತೂ ಅವಳು ಓಡಲು, ಕಲ್ಲನ್ನು ಕಾಲಿಗೆ ಹೊಡೆಯುವನು; ಗಂಗವ್ವನು ಅಯ್ಯಯ್ಯೋ ಎಂದು ಕುಂಟುತ್ತ ನೆಲಕ್ಕೆ ಬೀಳುವಳು.) ಈಗ ಹ್ಯಾಂಗದೆ ? ಓಡ್ತಿಯೇನಿನ್ನು ? (ಕೈ ಹಿಡಿಯುವನು)

ಗಂಗವ್ವ—(ಅಣಕಿಸುವ ಸೋಗಿನಿಂದ) ನನ್ನ ಕಾಲ ಮುರದು....ಮತ್ತೆ ಮತ್ತೆ ಓಡ್ತಿಯೇನಿನ್ನೂ ಅಂತಾನೆ. ಅಯ್ಯೋ, ನನ್ನ ಕಾಲಲ್ಲಿ ರಕ್ತ ಸುರೀತಾ ಇದೆ. (ಚನ್ನನು ನಗುವನು.)

[ಸಂಕಪ್ಪನು ಪ್ರವೇಶಿಸುವನು; ಚನ್ನನು ಗಂಗವ್ವನ ಕೈ ಬಿಟ್ಟು ದೂರ ಸರಿದು ಪೆಚ್ಚುಮೋರೆ ಹಾಕಿ ನಿಲ್ಲುವನು.]

ಸಂಕಪ್ಪ—ಏನೋ ಚನ್ನಾ, ಏನೇ ಗಂಗವ್ವಾ ಇದು ? ಬರ್ತಾ ಬರ್ತಾ ನಿಮ್ಮ ಆಟ ಮಿತಿಮೀರ್ತು. ಏನಾಯ್ತೇ ಗಂಗವ್ವ ನಿನ್ನ ಕಾಲೀಗೆ ?

[ಚನ್ನನು ಹೇಳಬೇಡವೆಂದು ಸಂಜ್ಞೆಮಾಡುವನು.]

ಚನ್ನ—ಮಾವಾ........ಇವಳು........ ಅ ಹಳ್ಳದ ದಂಡೇ ಮೇಲಿಂದ ಕೆಳಕ್ಕೆ ಧುಮುಕಿದಳು, ಕಾಲಿಗೇನೋ ಕಲ್ಲು ಎಡ್ವಿತಂತೆ. (ಮೊದಲಿನಂತೆ ಗಂಗೆಯೊಡನೆ ಸಂಜ್ಞೆ).

ಗಂಗವ್ವ— ಓಡುವಾಗ ಕಾಲೀಗೊಂದು ಕಲ್ಲು ತಾಕಿ ನೋವಾಯ್ತಪ್ಪಾ, ಅಷ್ಟೆ. (ಪ್ರತಿಸಂಜ್ಞೆ)

ಸಂಕಪ್ಪ—ನೀನ್ಯಾಕೆ ಓಡ್ದಿ ಅಪ್ಪ ? ಚನ್ನಾ, ಇದೆಲ್ಲಾ ನಿನ್ನ ಲೂಟೀ ಅಂತ ಕಾಣತ್ತೆ ಅಲ್ವೇ ! ನಾನಿನ್ನು ಇದನ್ನೆಲ್ಲಾ ಕೇಳ್ಳಿಕ್ಕಿಲ್ಲಾ ನೋಡು. ನಿಮ್ಮ ಕುಣತಾ ಏನಿದ್ರೂ ಮದ್ವೇ ಆದ್ಮೇಲೆ. ನಿಮ್ಮನ್ನ ಯಾರಾದ್ರೂ ನೋಡಿದ್ರೆ ಏನಂದಾರು ಗೊತ್ತಿದೆಯೋ ನಿಮ್ಗೆ ? ನನ್ನ ಮುಖಕ್ಕೆ ಕಪ್ಪು ಹಚ್ಚಬೇಕೂ ಅಂತ ಇದ್ಯೇನು ನಿಮ್ಮನಸ್ಸಿನಲ್ಲಿ ?

ಗಂಗವ್ವ— ಚನ್ನ ಓಡ್ಸಲಿಲ್ಲ ಅಪ್ಪಾ ನನ್ನನ್ನ. ಆ ಕಡೆ ನಮ್ಮ ಹೊಲಕ್ಕೆ ಯಾವ್ದೋ ಗಂಟೀ ನುಗ್ದ ಹಾಗಾಯ್ತು, ಅದನ್ನ ಓಡ್ಸಲಿಕ್ಕಂತ ನಾನು ಓಡ್ದೆ-ಬಿದ್ದೆ. ಅಗಾ ಆಕಳು ಹೊಲದಲ್ಲಿಯೇ.

ಚನ್ನ—ಹೌದೌದು ಮಾವಾ ! ನಾನೇನು ಓಡ್ಸಿ ಕೆಡಿವಿದ್ದಲ್ಲ ಅವಳನ್ನ .... ಅವಳಾಗಿಯೇ ಬಿದ್ದದ್ದು.

ಸಂಕಪ್ಪ— ಹಾಂ... ಹೌದೌದು, ನನಗೆಲ್ಲಾ ಗೊತ್ತಾಗತ್ತೆ ನಿಮ್ಮಾಟ. ಇದು ನಿಮ್ಮ ತಪ್ಪಲ್ಲ, ತಪ್ಪು ನನ್ನದು. ಮದುವೇ ಒಂದು ಇಷ್ಟರಲ್ಲೇ ಮಾಡಿಬಿಟ್ಟಿದ್ರೆ ಈ ಯಾವ ಸಂಕ್ಟಕ್ಕೂ ಕಾರಣಿರಲಿಲ್ಲಾ. ಆಗಲೀ, ಇನ್ನೇನು....ಸಾಲ್ದ ಕೂಡ ಸಾಲಾ. ಸಾಹುಕಾರ್ರ ಹತ್ರ ಸಾಲವಾದ್ರೂ ತಂದು ಈ ವರ್ಷ ನನ್ನ ತಲೇಮ್ಯಾಲಿನ ಭಾರಷ್ಟು ಇಳ್ಸಿಕೊಂಡು ಬಿಡ್ತೇನೆ.

ಚನ್ನ—ಬ್ಯಾಡ ಮಾವಾ ! ದಯವಿಟ್ಟು ಅಷ್ಟೊಂದು ಮಾಡ್ಬೇಡ್ರಿ .... .... ನಮಗೋಸ್ಕರ ನೀವು ಸಾಲದಲ್ಲಿ ಬಿದ್ದು ಕೊಳೆಯೋಙ್ಬೇಡ. ಈಗ ಇರೋ ಸಾವಕಾರ್ರ....ಸಾಲವೇ ದೊಡ್ಡದೊಂದು ಶೂಲಾ ಆಗಿ ಕುಂತದೆ ಈ ವರ್ಷದ ಪೈರ್ ಕೈಗೆ ಬರ್‍ತಲೇ ಅವರದ್ದೊಂದು ಋಣಾ ಹರ್‍ಸಕೊಂಡು ಬಿಡ್ರಿ ; ಲಗ್ನಾ ಮುಂದೆ ನೋಡೋಣವಂತೆ.

ಗಂಗವ್ವ—ಹೌದಪ್ಪಾ ! ನಾನನ್ನೋದೂ ಅದನ್ನೇ, ಮುಪ್ಪಿನ ಕಾಲದಲ್ಲಿ ನೀವು ಇಷ್ಟ್ಯಾಕೆ ಚಿಂತೆ ಹಚ್ಕೋಬೇಕು ಸಮ್ನಾಗಿ !

ತಿಮ್ಮ—(ತೆರೆಯಲ್ಲಿ) ಸಂಕಪ್ಪನೋರಾ ! ಓ ಸಂಕಪ್ಪನೋರ ! ಇದ್ದೀರೇನು ಹೊಲ್ದಲ್ಲಿ ?

ಸಂಕಪ್ಪ— ಯಾರು--ತಳವಾರನ್ಮಾಕರೇನು ? ಏನು ಬಂದಿಯಪ್ಪಾ ತಿಮ್ಮಪ್ಪಾ?

ತಿಮ್ಮ—ಏನಿಲ್ಲಣ್ಣಾ ! ಇಲ್ಲೇ ಸಾಹುಕಾರ್ರ ಮನೇಕಡೆ ಹೋಗಿದ್ದೆ ; ಅವ್ರು ನಿಮ್ಮನ್ನ ಕರಕೊಂಡೇ ಬಾ ಅಂದ್ರು, ಬಂದೆ....ಬರ್‍ತೀರೇನು ?

ಸಂಕಪ್ಪ—ಆಗಲಪ್ಪಾ, ಈಗಲೇ ಬಂದೆ ಅಲ್ಲೇ ಹೊಲ್ದ ಅಂಚಲ್ಲಿ ಆಕಳೂ ಎತ್ಗಳನ್ನು ಬಿಟ್ಟುಬಂದಿದ್ದೇನೆ, ಅದನ್ನಷ್ಟು ಕೊಟ್ಟಿಗೆಯಲ್ಲಿ ಕಟ್ಟಿಬರ್‍ತೇನೆ.

ತಿಮ್ಮ—ಏನು ಸಂಕಣ್ಣಾ ! ಆ ಆಕಳು ಎತ್ಗಳ ಕೆಲ್ಸವನ್ನೂ ನೀವೇ ಮಾಡ್ತಿರ ಬೇಕೇನಿನ್ನೂ ? ಚನ್ನಪ್ಪಾ ಇದ್ದಾನೆ, ಗಂಗವ್ವ ಇದಾಳೆ, ಅವರ್‍ಯಾರಾದ್ರೂ ನೋಡ್ಕೊಳ್ಳಿಕ್ಕಿಲ್ಲೇನು ?

ಸಂಕಪ್ಪ—ಹಾಂಗಲ್ಲ ತಿಮ್ಮಣ್ಣ. ಅವ್ರೆಲ್ಲರೂ ನೋಡ್ಕೋತಾರೆ. ಆದ್ರೆ ನನ್ನ ಮನಸ್ಸಿಗೆ ಅದು ಸರೀಬರೋಹಾಂಗಿಲ್ಲಾ. ನನ್ನ ಎತ್ತಿನ ಚಾಕರೀ ನನ್ನ ಗೋವಿನ್ಸೇವೆ ನಾನೇ ಮಾಡ್ದೇ ಅಂದ್ರೆ ನನ್ಗೆ ಉಂಡ ಅನ್ನ ಮೈಗೆ ಹಿಡಿಸತ್ತೆಕಾಣಪ್ಪಾ. ಒಕ್ಕಲೀಗರೀಗೆ ಇರೋದೇ ಎತ್ತೂ ಗೋವು; ಅವೇ ನಮ್ಮ ದೇವ್ರುಕಾಣಪ್ಪಾ. ಕೇಳ್ಳಿಲ್ಲೇನು ನೀನು ?

## ಲಾವಣಿ

ಗೋವಿನಂಥಾ ದೇವರೊಂದುಂಟೇ - ಜನ್ಮವಿತ್ತ ತಾಯಿಲ್ಲದೆ
ಮುಕ್ತಿ ತಾನುಂಟೇ |
ಗೋವೇ ನಮ್ಮ ಪೂಜ್ಯ ತಾಯಿ ಗೋವೇ ಸುಖಸೌಖ್ಯದಾಯಿ
ಪೂರ್ವಪುಣ್ಯದಿಂದ ಸಿಕ್ಕ ಧರ್ಮದವತಾರೆಯಾಕೆ ॥ ಪ ॥

ಹೆತ್ತ ತಾಯೀ ಸ್ತನ ಬತ್ತೀತೂ – ಮುತ್ತಿನಂಥ ಪಿತನೆದೆ
ಪ್ರೇಮ ತಗ್ಗೀತು |
ಮತ್ತೆ ನಿಲ್ಲನೆಲ್ಲ ಬಿಡೆ ಸತ್ತೆನೆಂದು ಚೀರುತಿರೆ–ಎತ್ತಿ ತನ್ನ
ಮೊಲೆಯನಿತ್ತು
ದತ್ತ ತಾಯಿಯಾಗಿ ಕಾದ ॥ ೧ ॥

ತನ್ನ ಸುಖ ತಾನು ಮರೆತು–ನಿನ್ನದೆಲ್ಲ ಕಷ್ಟಸುಖದೊಳು ಬೆರೆತು–
ಉತ್ತು ಬಿತ್ತಿ ಬೆಳೀ ಎಂದು ನೆತ್ತರೆಲ್ಲ ಬಲಿಯನಿತ್ತು–
ನಿತ್ಯ ನಿನ್ನ ಸೌಖ್ಯಕಾಗಿ ಪ್ರೇಮಬಳಗವಿತ್ತ ತಾಯಿ ॥ ೨ ॥

ಇಂಥ ತಾಯ ಬಲಿಯನೀವರೋ – ಶಕ್ತಿಗುಂದೆ ಬಳಗಸಹಿತ
ಕೊಲ್ಲಲೀವರೋ |
ಹೆತ್ತತಾಯನತ್ತ ಮರೆತು ದತ್ತತಾಯ ಕೊಲ್ಲಲಿತ್ತು
ಹೊತ್ತ ಮಾತೆ ಭಾರತೀಯ ನಿತ್ಯ ಮರೆತೀಹರಯ್ಯ ॥ ೩ ॥

ಹೀಂಗ್ ಅಯ್ತೆಕಾಣಪ್ಪಾ ಗೋವಿನ ಮಹತ್ವ.

ತಿಮ್ಮ—ವ್ಹಾ! ಚೆನ್ನಾಗಿದ್ರಪ್ಪಾ ನಿಮ್ಮ ಲಾವಣೀ.

ಸಂಕಪ್ಪ—ಏ ಗಂಗೀ! ಮುದ್ಕಾ ಹಾಡೋದ್ಕೇಳ್ತಾ ಬಾಯ್ಬಿಟ್ಟ್ಕ ಕುಂತೆ ಯಲ್ಲೀ-ನೀನಿಲ್ಲೀ? ಹೋಗು ಹೋಗು-ಬೇಗ ಹೋಗಿ ಆ ಆಕಳೂ ಎತ್ತುಗಳನ್ನ ಸ್ವಲ್ಪ ಅಲ್ಲೀ ಆಡ್ಸಾತ್ತ ಇರು, ನಾನಿದೇ ಬಂದುಬಿಟ್ಟೆ. (ಗಂಗವ್ವ ಹೋಗುವಳು) ತಳವಾರಾ! ಹೋಗೋಣೇನು ನಾವೂ ಹಾಗಾದ್ರೆ....ಏ ಚನ್ನಾ! ಆ ಹೊಲ್ದ ಕಡೇ ನೋಡ್ಕೋ, ಯಾವ ದಾದ್ರೂ ಗಂಟೇ ಗಿಂಟೇ ಬಂದಾವು ಜಾಗ್ರತೆ. (ಹೋಗುವನು)

ಗಂಗವ್ವ—(ನಿಧಾನವಾಗಿ ಬಂದು) ಏ ಚನ್ನಾ! ಆ ಹೊಲ್ದ ಕಡೇ ನೋಡ್ಕೋ; ಯಾವುದಾದ್ರೂ ಗಂಟೇ ಗಿಂಟೇ ಬಂದಾವು ಜಾಗ್ರತೆ.

ಚನ್ನ—ಏ ಸಿನ್ನ! ಮಾವ ಅಲ್ಲೀ ಎತ್ತೂ ದನಾ ಕಾಯ್ತಿರೂ ಅಂದ್ರೇ........ ನೀನಿಲ್ಲಿ ಬಂದು ಅವ್ನ ನಗಚಾಟಕೀ ಮಾಡ್ತಾ ಕುಂತಿದ್ದಿಯೇನು? ವ್ಹಾ....ಆಕಳ ಎಲ್ಲಿ ಬಿಟ್ಟೆಯೇ?

ಗಂಗವ್ವ—ನೋಡಲ್ಲೀ? ಮರಕ್ಕೆ ಕಟ್ಟಿಹಾಕಿದ್ದೀನಿ; ಮೆಂದು ಮೆಂದು ಆದರ ಹೊಟ್ಟೀ ಒಂದು ಗುಡಾಣದ್ಹಾಂಗೆ ಆಗೇದ ನೋಡು.

ಚನ್ನ—ಯೇ ಹೋಗೇ, ಸಾಕು ನಿನ್ನ ಅಧಿಕ ಮಾತು. ಹೇಳ್ದಷ್ಟು ಕೆಲ್ಸಾ ಮಾಡು ನಡೀ.

ಗಂಗವ್ವ—ಹೂಂ_ನಾನೂ ಅದ್ದೇ ಅಂತೀನಿ. ಹೋಗು, ಹೊಲಾ ಕಾದ್ಕೊಂಡಿರು. ಪೈರು ಕೈಗೆ ಬರೋವಾಗ ಯಾವುದಾದರೂ ಗಂಟೇ ಗಿಂಟೇ ತಿಂದುವೂ ಅಂದ್ರೆ ಮತ್ತೆ ಸಾಹುಕಾರ್‍ರೀಗೆ ಏನು ಕೊಡಬೇಕು? ಕೇಣೀ ಏನ್ಕೊಡಬೇಕು?

ಚನ್ನ—ಏ....ಗಂಗೀ, ಇದೆಲ್ಲಾ ನಡೀದು ನಿನ್ನಧಿಕ ಮಾತು! ಕೇಳ್ದಿಯೇನು ಮಾವಾ ಹೇಳಿದ್ದು....ನಾಳೆ ನೀನು ನನ್ನ ಮದ್ವೀ ಆಗತಕ್ಕ ಹೆಂಡ್ತೀ.... ಆದ್ರಿಂದ ನಾನು ಹೇಳಿದ್ಹಾಂಗೆ ಕೇಳ್ಕೊಂಡಿರಬೇಕು .... ನೀನು.... ಗೊತ್ತಾಯ್ತೇನು?

ಗಂಗವ್ವ—ಗೊತ್ತಾಯ್ತು. ನಾಳೇ ಮದ್ವೇ ಆದನಂತ್ರ ನೋಡೋಣಂತೆ ಅದ ನ್ನೆಲ್ಲಾ. ಅದ್ರೆ ಇಂದು ನಾನು ನಿನ್ನನ್ನ ಮದ್ವೇ ಆಗಬೇಕಾದ್ರೆ ನೀನು ನಾನು ಹೇಳ್ದಂತೆ ಕೇಳ್ಕೊಂಡಿರಬೇಕು. ಹಾಂ-ಆದ್ರಿಂದ ಹೋಗು ಹೊಲ್ದ ಕಡೇಗೆ.

ಚನ್ನ—ಹಾಂ ಹಾಂ! ಇಷ್ಟ ಡೌಲೇನು ನಿನ್ನದು? ಆಗಲೀ .... ಯಾರು ನಿನ್ನನ್ನ ಮದ್ವೆ ಆಗ್ತಾರೋ ನಾನೂ ನೋಡ್ತೇನೆ. (ಬಟ್ಟೆ ತೊಳೆಯ ತೊಡಗುವನು. ಗಂಗವ್ವನು ನಿಧಾನವಾಗಿ ಬಂದು ಎಲ್ಲಾ ಬಟ್ಟೆಯನ್ನೂ ಕಿತ್ತು ಹಳ್ಳಕ್ಕೆ ಬಿಸುಟು ಓಡುವಳು. ಹಿಂದಿನಿಂದಲೇ ಚನ್ನನೂ ಓಡುತ್ತ) ಲೇ ಗಂಗೀ!

[ ತೆರೆ ಬೀಳುವುದು ]

## ನೋಟ ೪

[ ಶಿವಗ್ರಾಮದ ಒಂದು ಗಲ್ಲಿ. ಸಾಹುಕಾರರ ಮನೆಯ ಆಳು ಮುದ್ದಜ್ಜನೂ ಸಂಗಯ್ಯನವರೂ ಪ್ರವೇಶಿಸುವರು. ]

ಸಂಗಯ್ಯ—ಏನೋ ಮುದ್ದಪ್ಪಾ, ನನ್ನನ್ನ ಕರೇಕಳ್ಸಿದ್ದು ಸಾಹುಕಾರ್ರೋ ಅವ್ವನವ್ರೋ?

ಮುದ್ದಜ್ಜ—ಅವ್ವನೋರು ಸ್ವಾಮಿ-ಕೂಡ್ಲೇ ಹೋಗಿ ಕರಕೊಂಡು ಬಾ ಅಂದ್ರು.

ಸಂಗಯ್ಯ—(ಸ್ವ) ಅವ್ವನೋರು ಕರೀಲಿಕ್ಕೆ ಹೇಳಿದ್ದೇನೋ ಸಂತೋಷವೇ. ಅವರನ್ನ ನೋಡಬೇಕೂ ಅಂತ ಬಹು ದಿನದಿಂದಲೂ ಆಶೆ ಇತ್ತು ನನ್ಗೆ. (ಪ್ರ) ಏನಪ್ಪಾ ಮುದ್ದಪ್ಪಾ! ಸಾಹುಕಾರ್ರು ಮನೇಲಿದಾರೇನೋ?

ಮುದ್ದಜ್ಜ—ಇದ್ರು ಸ್ವಾಮೀ! ಆದ್ರೂ ಅವ್ರ ಬೈಠಕ್ಕೆಲ್ಲಾ ಮಹಡೀ ಮ್ಯಾಗೇನೇ.

ಸಂಗಯ್ಯ—(ಸ್ವ) ಆದೇನೋ ಸಂತೋಷವೇ. (ಪ್ರ) ಎಷ್ಟಂದ್ರೂ ಸಾಹು ಕಾರ್‍ರಲ್ಲೇನೋ ಮುದ್ದಪ್ಪಾ – ಅವ್ರು ಇರೋದು ಅಲ್ಲೇ. ಆದ್ರೇ ನಾವೆಲ್ಲಾ ಮಹಡೀ ಹತ್ತಿದ್ರೆ ಆದೀತೇನೋ ?

ಮುದ್ದಜ್ಜ—ಏನ್ನಾವಕಾರ್‍ರೋ ಸರಕಾರ್‍ರೋ ಸ್ವಾಮೀ, ನನಗೊಂದೂ ತಿಳಿ ಯೋಕಿಲ್ಲ. ನಾಳೆ ಈ ಸಂಪತ್ತನ್ನೆಲ್ಲಾ ಅನುಭವಿಸೋರ್‍ಯಾರೋ ಶಿವ್ನೇ ಬಲ್ಲ !

ಸಂಗಯ್ಯ—ಅದ್ಯಾಕೋ ಮುದ್ದಪ್ಪಾ ಹಾಗಂತೀ ?

ಮುದ್ದಜ್ಜ—ಅಲ್ಲ ಸ್ವಾಮ್ಯೋರಾ ! ಸಂತಾನವೇ ಇಲ್ಲದಿದ್ದ ಮ್ಯಾಗೇ ಈ ಶ್ರೀಮಂತಿಕೇನೆಲ್ಲಾ ಉಣೋರ್‍ಯಾರ ಹೇಳಿ. ಸಾಪಕಾರ್‍ರೀಗೆ ಮದ್ವೇ ಆಗಿ ಐದಾರು ವರ್ಸ ಆಗಿಹೋತು, ಇನ್ನೂ ಮಕ್ಕಳಿಲ್ಲಾ ಮರೀ ಇಲ್ಲಾ.

ಸಂಗಯ್ಯ—ಅದ್ಯಾಕೆ ಮುದ್ದಪ್ಪ ? ಮಕ್ಕಳಿಲ್ಲವಾದ್ರೆ ಆಗತ್ತೆ. ಸಾಹುಕಾರ್‍ರು ಇನ್ನೊಂದು ಮದ್ವೆ ಆಗ್ತಾರೆ. ಅವರೀಗಲೇ ಮುದ್ಕರಾಗಿಬಿಟ್ಟರೇನು ?

ಮುದ್ದಜ್ಜ—ಮುದ್ಕರಲ್ಲಾ ಸಾಮೀ. ಆದ್ರೂ ಹುಡ್ಗರಂತೂ ಅಲ್ಲ. ಅವ್ವ ನೋರು ಮಾತ್ರ ಪುಣ್ಯಾತಗಿತ್ತೀ. ದಾನಧರ್ಮಕ್ಕೆ ಎತ್ತಿದ ಕೈ. ಅವರೀಗೆ ಹಗ್ಲೂ ರಾತ್ರೂ ಇದೇ ಚಿಂತೆ ಸಂತಾನದ್ದು. ಇದಕ್ಕಾಗಿ ಅವ್ರು ಪಡ್ದೇ ಇದ್ದ ಕಷ್ಟ ಇಲ್ಲಾ. ಆದ್ರೆ ಎಲ್ಲ ನಿಷ್ಫಲ್ವೇ !

ಸಂಗಯ್ಯ—ಅಯ್ಯೋ ಪಾಪವೇ ! ಇದೆಲ್ಲಾ ಪರಮೇಶ್ವರ್‍ನ ಆಟಕಾಣಪ್ಪಾ ಮುದ್ದಪ್ಪಾ ಉಣ್ಣೋಕೆ ಮುದ್ದೆ ಇಲ್ದಿದ್ದಲ್ಲಿ ಹಿಂಡುಗಟ್ಲೆ ಮಕ್ಳು, ಇದ್ದಲ್ಲಿ-ಅದೇ ಇಲ್ಲ.

ಮುದ್ದಜ್ಜ—ಹೌದೌದು ಬುದ್ದೀ ! ಎಲ್ಲಾ ಭಗವಂತ್ನ ಆಟ, ಇಲ್ದೇಯಿದ್ರೆ ಚಿನ್ನದಂಥಾ ಅವ್ವನೋರಿಗೆ ಒಂದಾದ್ರೂ ಸಂತಾನ ಆಗಬಾರ್ದೇ ?

ಸಂಗಯ್ಯ—ನನ್ಗಿದು ಗೊತ್ತೇ ಇಲ್ಲಕಾಣಪ್ಪಾ ಮುದ್ದಪ್ಪಾ. ನಾನು ಒಂದೆರಡು ಬಾರಿ ಮಾತ್ರ ಸಾಹುಕಾರ್‍ರ ಮನೇಗೆ ಬಂದಿದ್ದೆ. ಈವರೆಗೂ ನನ್ಗೇ

ಜ್ಯೋತಿಷ್ಯದ ವ್ಯಾಸಂಗದ ಗಡಿಬಿಡಿಯಲ್ಲಿ ನಾನು ಹಂಪೇ ಬಿಟ್ಟು ಕದಲಲೇ ಇಲ್ಲ. ಈಗೇನೋ ತಂದೆಯವ್ರು ಸತ್ತದ್ದರಿಂದ ಅವರ ಸ್ಥಾನಕ್ಕೆ ನಾನೇ ಬರಬೇಕಾಯ್ತು. ಬಿಡಲಿಕ್ಕೆ ಆಗತ್ತೆಯೇ ಹೇಳು - ಹಿರಿಯರಿಂದ ನಡೆದುಬಂದ ವೃತ್ತಿ.

ಮುದ್ದಜ್ಜ—ಅದ್ಹ್ಯಾದು ಬುದ್ಧೀ! ಓಹೋ-ಅದು ನೋಡಿ, ಅವ್ರ್ಯಾವ್ರು ಆಗಲೇ ಗುಡೀಗೆ ಹೊರ್ಟುಬಿಟ್ರು ಮಾದೇವ್ನ ದರ್ಶನಕ್ಕೆ; ಯಿನ್ನವ್ರು ಬರೋಕೆ ಗಂಟೆ ಎರಡಾದ್ರೂ ಆಗತ್ತೆ. ಆವರೆಗೂ ಕಾಯ್ತೀರೇನು ನೀವು ?

ಸಂಗಯ್ಯ—ಬೇಡಕಣಪ್ಪಾ. ನನ್ಗೆ ಇಲ್ಲೇ ಕೆಲ್ಸಾ ಇದೆ ಸ್ವಲ್ಪ ಅಕ್ಕಸಾಲೆ ಯಲ್ಲಿ; ಅವನನ್ನ ಕಂಡಕೊಂಡು ಇನ್ನು ಎಡಡ್ಗಂಟೇ ಬಿಟ್ಕೊಂಡು ನಾನೇ ಬರ್‍ತೇನೆ ಅಲ್ಲೀಗೆ.

ಮುದ್ದಜ್ಜ—ಹಾಗೇ ಮಾಡ್ರಿ ಅಯ್ಯನೋರಾ, ನಾನಿನ್ನ ತಿರಗಿ ಕರೆಯೋಕೆ ಬರೋದಿಲ್ಲ - ಏನು? ಬರ್‍ತೇನೆ ನಾನು, ಶರಣು. (ಹೋಗುವನು. ಸಂಗಯ್ಯನವರೂ ಏನೋ ಎಣಿಕೆ ಹಾಕುತ್ತ ಹೋಗುವರು.)

[ತೆರೆ ಬೀಳುವುದು]

## ನೋಟ ೫

[ಗಿರಿಯಪ್ಪನವರ ಬೈಠಕ್ ಖಾನೆ. ಸಾಹುಕಾರ್‍ರು ಮಡಿಯಲ್ಲಿ ಸುತ್ತುತ್ತ ಇಣಕಿ ನೋಡುತ್ತಲಿರುವರು.]

ಗಿರಿಯಪ್ಪ—(ಸ್ವ) ಯಾಕಿನ್ನೂ ಸಂಕಪ್ಪ ಬಂದೇ ಇಲ್ಲವಲ್ಲಾ? ತಲವಾರನ್ಯಾಕ ಏನಾದ್ರೂ ಹೋಗಿ ಹೇಳಿದನೋ ಇಲ್ಲವ್ವೋ! ಈ ತಲವಾರ್‍ರೀಗೆ ನೂರ್‍ಕಡೇ ಬಿಟ್ಟ ಕಾದಿರತ್ತೆ. ಹಾಂ-ಘಾಯಲೀ ಅವನು ಆ ಕಡೆ. (ಪ್ರ) ಲೋ ಮುದ್ದಪ್ಪಾ! ಮುದ್ದಾ!

ಮುದ್ದಜ್ಜ—ಬಂದಿವ್ನಿ ಬುದ್ಧಿ. (ಕೆಲ್ಸ ಮಾಡುತ್ತಿರುವವನು ಹಾಗೇ ಬರುವನು.)

ಗಿರಿಯಪ್ಪ—ಹೊರ್ಗೆ ಸಂಕಪ್ಪ ಬಂದ್ನೇನೋ ?

ಮುದ್ದಜ್ಜ—ಇಲ್ಲಾ....ಕಾಣಲಿಲ್ಲಾ ಬುದ್ದೀ.

ಗಿರಿಯಪ್ಪ—ತಲವಾರ ತಿಮ್ಮಾ ?

ಮುದ್ದಜ್ಜ—ಇಲ್ಲ, ಅವ್ನೂ ಬಂದಿಲ್ಲ ಬುದ್ದೀ. ಹೋಗಿ ಕರೀಲೇನು ?

ಗಿರಿಯಪ್ಪ—ಹಾಂ-ಹೋಗು ಹೋಗು. (ಹೊರಡುವಷ್ಟರಲ್ಲಿ) ಆಂ....ಬೇಡ ಮುದ್ದಪ್ಪಾ, ಈಗ ಬಂದಾರು ನೋಡೋಣ.... ಅದಿರಲೀ ಮುದ್ದಪ್ಪಾ, ನೀನಾ ಸಂಕಪ್ನ ಮಗ್ಳನ್ನ ಎಂದಾದ್ರೂ ಕಂಡಿದ್ದೀ ಏನು ? ಹ್ಯಾಂಗಿದ್ದಾಳೋ ಅವಳು ?

ಮುದ್ದಜ್ಜ—ಹ್ಯಾಂಗನ್ನೀ ಬುದ್ದೀ ? ವೈನಾಗದಾಳೆ ! ಕಣ್ಣು ಮೂಗು ಮುಖ ತಿದ್ದಿ ಇಟ್ಟಹಾಂಗದೆ. ಈ ಸಂಕಪ್ನೂ ಪಾಪ ಒಬ್ಬಳೇ ಮಗ್ಳೂ ಅಂತ ಚೆನ್ನಾಗಿ ಸಾಕ್ಕೊಂಡಿದಾನೆ.

ಗಿರಿಯಪ್ಪ—ಸಂಕಪ್ನ ಮಾತಿರ್ಲಿ ಮುದ್ದಪ್ಪಾ, ಮಗ್ಳು ಚೆನ್ನಾಗಿದಾಳೋ ಇಲ್ವೋ ? ಏನವಳ ಮುಖ, ಏನವಳ ಒನಪು-ವಯ್ಯಾರ ! ಸಾಕ್ಷಾತ್ ದೇವಕನ್ಯೆ ಕಾಣೋ.

ಮುದ್ದಜ್ಜ—ನಾನು ಕಂಡಿಲ್ಲ ಬುದ್ದೀ ಆ ದೇವಕನ್ಯೇನ. ಅಂತೂ ಗಂಗವ್ವ ಮಾತ್ರ ನಮ್ಮ ಹಳ್ಳಿಯ ಹತ್ತೂ ಜನ್ರಿಗಿಂತ ಸೊಗಸಾಗದಾಳೆ

ಗಿರಿಯಪ್ಪ—ಅಹಹಾ ! ಏನು ಹೆಸ್ರೂ ಅಂದೆ ಅವಳದ್ದೂ....ಗಂಗವ್ವ ! .... ಹೌದು, ನಿಜವಾಗಿಯೂ ಅವಳು ಗಂಗೆಯೇ ಕಾಣೋ ! ಆದ್ರೆ ಅವಳು ಆ ದರಿದ್ರರ ಜೋಪಡಿಯಲ್ಲಿರತಕ್ಕವಳಲ್ಲ, ಬಹು ದೊಡ್ಡವ್ರ ಕೈಯನ್ನ ಹಿಡಿಯತಕ್ಕವಳು-ಭಾಗ್ಯವಂತೆ.

ಮುದ್ದಜ್ಜ—ಹಾಂಗಂದ್ರೇನು ಬುದ್ದೀ ? ಲೋಕದಾಗೆಲ್ಲಾ ವೈನವಾಗಿರೋರು ಶ್ರೀಮಂತ್ರೀಗೇ ಅಂತಾ ಸಿಕ್ಕಾ ವತ್ತಿ ಕಳ್ಸಿದಾನೇನು ಶಿವ ? ಬಡ್ವನಿಗೇನು ಮೂಗಿಲ್ಲವೇ, ಮುಖ ಇಲ್ವೇ, ಕಣ್ಣಿಲ್ವೇ, ಯಾವುದಿಲ್ಲ ? ಎಲ್ಲಾ ಇದೆ. ಇರ್ದೀ ಇರೋದಂದ್ರೆ ರೊಕ್ಕಾ ಒಂದೇ. ಪ್ರೇಮ ಒಂದಿತ್ತೂ ಅಂದ್ರೆ ಹೆಣ್ಣಿಗೆ ಗಂಡೇ ರೊಕ್ಕಾ, ಗಂಡಿಗೆ ಹೆಣ್ಣೇ ಚೊಕ್ಕಾ !

ಗಿರಿಯಪ್ಪ—ಹಾಂಗಲ್ಲೋ ಮುದ್ದಪ್ಪಾ.

ಮುದ್ದಜ್ಜ—ಮತ್ಯಾಹ್ಹಂಗ್ ಬುದ್ದೀ ?

ಗಿರಿಯಪ್ಪ—ಅಲ್ವೋ....ಉಂಡು ತಿನ್ನಲಿಕ್ಕೆ ಸರಿಯಾಗಿ ಇಲ್ದಿದ್ದನಂತ್ರ ಆ ಪ್ರೇಮ ತಗೊಂಡು ಏನ್ಮಾಡಲಿಕ್ಕೆ ಬರತ್ತೆಯೋ ? ಆದ್ರಿಂದ್ಲೇ ನಾನನ್ನೋದೇನಂದ್ರೇ ಪ್ರೇಮಾ ಬಲೀಬೇಕಾದ್ರೆ ಗಂಡ್ನಲ್ಲಿ ಕೊಡಲಿಕ್ಕೆ ಬೇಕಾದಷ್ಟು ಇರ್ಬೇಕು ಕಾಣಪ್ಪಾ.

ಮುದ್ದಜ್ಜ—ನಂಗೊತ್ತಿಲ್ಲಾಪ್ಪಾ. ನಿಮ್ಮ ದೊಡ್ಡವರಲ್ಲಿ ಹಾಂಗೇನಾದ್ರೂ ಉಂಟೇನೋ ಬುದ್ದಿ....ಆದ್ರೆ ನಮ್ಮ ಬಡ್ವರಲ್ಲಿ ಈ ಪ್ರೇಮಾ ಅನ್ನೋದು ಕ್ರಯ ಕೊಟ್ಟು ತಕೊಂಬೋ ವಸ್ತುವಲ್ಲ ಕಾಣ್ರಪ್ಪಾ-ಹೃದ್ಯ ಒಪ್ಪಿದ್ದು. ಬಿಕ್ಕೆ ಬೇಡೋ ಭಿಕಾರಿಯಲ್ಲೂ ಅವ್ನ ಆಕೀಗೆ ಪ್ರೇಮ ಇದ್ದೇ ಇರತ್ತೆ.,

ಗಿರಿಯಪ್ಪ—ನೀನು ದಡ್ಡ, ಶತದಡ್ಡ. ನಿನಗೇನೂ ತಿಳಿಯೋದಿಲ್ಲ ಹೇಳಿದ್ರೆ.

ಮುದ್ದಜ್ಜ—ಇದ್ರೂ ಇರ್ಬಹುದು ಬುದ್ದೀ. ಅದ್ಕಂತ್ಲೇ ಚಿಕ್ಕಂದ್ನಿಂದ್ಲೂ ನಿಮ್ಮ ಹಿರಿಯೋರಲ್ಲಿ ಸೇವೇ ಮಾಡ್ಕೊಂಡು ಬಂದೇ ಈ ಗಡ್ಡೆಲ್ಲಾ ಹಣ್ಣಾಗಿ ಹೋತು. ಧನಿಯೋರ ಕೂಡ ವಾದಾ ನಂಗ್ಯಾಕ ಬೇಕು ಬುದ್ದೀ ? ನಾನು ದಡ್ಡಾ-ಹೇಳ್ರಿ ಬುದ್ದೀ ಮುಂದೇನು ?

ಗಿರಿಯಪ್ಪ—ಮುದ್ದಪ್ಪಾ ! ನೀನು ನಮ್ಮ ಅಜ್ಜಂದಿರ ಕಾಲದಿಂದ್ಲೂ ಈ ಮನೆ ಸೇವೆ ಮಾಡ್ಕೊಂಡಿದ್ದವ, ನಿನ್ನ ಬೆನ್ನೆಲುಬು ಆ ಸೇವಾಭಾರದಿಂದಲೇ ಬಗ್ಗಿದೆ. ನಮ್ಮ ಹಿತದ ಯೋಚ್ನೆಯಲ್ಲೇ ನಿನ್ನೀ ಕೂದ್ಲೂ ನೆರತದೆ.

ಇಂಥಾ ನೀನು ನನ್ನ ಆಪ್ತನಲ್ಲವೇ ? ಹೌದು, ನಿಜವಾಗಿಯೂ ನೀನು ನನ್ನ ಆಪ್ತ ಹಿತೈಷಿ ; ಆದ್ರಿಂದ್ಲೇ ಒಂದ್ಮಾತು ಕೇಳ್ಬೇಕಂತಿದೇನೆ.... ಕೇಳ್ಲೇನು ?

ಮುದ್ದಜ್ಜ—ಅದ್ಯಾಕ ಬುದ್ಧೀ ಇಷ್ಟ ಸಂಕೋಚಾ ? ಹ್ಯಾಗಿದ್ರೂ ನಾನು ತಮ್ಮ ಸೇವಕ, ದಡ್ಡ. ನನಗೇನು ತಿಳೀತದೆ ಬುದ್ಧೀ ತಮ್ಗೆ ಹೇಳೋಕೆ ?

ಗಿರಿಯಪ್ಪ—ನೋಡು, ನನಗೆ ಆಸ್ತಿ ಇದೆ, ಮನೇ ಇದೆ, ಸಂಪತ್ತಿದೆ, ಎಲ್ಲಾ ಇದೆ....ಆದ್ರೆ....

ಮುದ್ದಜ್ಜ—ಸಂತಾನ್ವೇ ಇಲ್ಲ–ಅಷ್ಟೇ ಅಲ್ವೇನು ಬುದ್ಧೀ ತಮ್ಮ ಅಂಬೋಣಾ ? ಶಿವಾ ನಡ್ಸಿದ್ರೆ ಇನ್ನೂ ಯಾಕಾಗಬಾರ್ದು ನನ್ನೊಡೆಯಾ ! ತಾವೇನು ಮುದ್ಕರೇ ಅಥವಾ ಅವ್ವೋರೇನು ಬಂಜೆಯಾದರೇ ?

ಗಿರಿಯಪ್ಪ—ಇಲ್ಲ ಮುದ್ದಪ್ಪಾ–ಇನ್ನವಳಲ್ಲಿ ಸಂತಾನದ ಆಶೇ ಇಲ್ಲ ನನ್ಗೆ. ಆದ್ರಿಂದ್ಲೇ ನಾನಿನ್ನೊಂದು ಹೊಸ ಮದ್ವೇ ಮಾಡ್ಕೋಬೇಕಂತಿದ್ದೇನೆ.

ಮುದ್ದಜ್ಜ—ಏನು ತಮಗೆ ಇನ್ನೊಂದು ಮದ್ವೇ ಅಂದ್ರಾ ?

ಗಿರಿಯಪ್ಪ—ಹೌದು ಮುದ್ದಪ್ಪಾ ; ಅದಕ್ಕಾಗಿಯೇ ನಾನಾ ಸಂಕಪ್ನ ಮಗ್ಳು ಗಂಗೆಯನ್ನ ಮದ್ವೇ ಮಾಡ್ಕೋಬೇಕಂತ ಇದೇನೆ.

ಮುದ್ದಜ್ಜ—ಬ್ಯಾಡ ಬುದ್ಧೀ–ತಮ್ಗೆಷ್ಟಕ್ಕೂ ಲಗ್ನ ಬ್ಯಾಡ. ಇನ್ನು ಯಾವ ಮಹಾತಾಯಿ ಬಂದ್ರೂ ಅವ್ವಾರಂತೋರು ಮನೇ ಸೇರ್ರು. ಇನ್ನೊಂದು ಮಹಾತಾಯೀನ ತಂದು ನನ್ನ ಅವ್ವನ ಎದೇ ಮೇಲೆ ಕುಣ್ಸಿ ಅವ್ರ ಕಣ್ಣೀರು ತರ್ಸಬ್ಯಾಡ್ರಿ. ಆ ನನ್ನ ತಾಯೀ ಮನಸ್ಸು ನೊಂದಕೊಂಡ್ರೆ ಮನೇಗೆಷ್ಟಕ್ಕೂ ಹಿತಾ ಅಗ್ದು ಬುದ್ಧೀ.

ಗಿರಿಯಪ್ಪ—ಅವ್ಳ ಒಪ್ಪಿಗೆಯಿಂದ್ಲೇ ನಾನಾ ಗಂಗೆಯನ್ನ ಮದ್ವೆಯಾಗ್ತೇನೋ, ಆಮೇಲೇನು ಮತ್ತವಳಿಗೆ ಚಿಂತೆ ?

ಮುದ್ದಜ್ಜ—ಅಯ್ಯನೋರಾ! ಆ ಸಂಕಪ್ಪ ನಿನ್ನೆ ನಿನ್ನೆ ನಿಮ್ಮನೇಲಿ ಜೀತಾ ಮಾಡ್ಕೊಂಡಿದ್ದಾ. ಅಂವ, ಮತ್ತವನ ಮಗಳು ತಮ್ಗೆ ಮಕ್ಕಳೀಗೆ ಸಮಾನ. ಅಂಥಲ್ಲಿ ಸಂಬಂಧ ಬ್ಯಾಡ ನನ್ನೊಡೆಯಾ!

ಗಿರಿಯಪ್ಪ—ಏ! ನಿನ್ನ ಉಪದೇಶಾ ನನಗೆ ಬೇಡ; ನಿನ್ನಿಂದ ಬುದ್ಧೀ ಹೇಳ್ಸಿ ಕೊಳ್ಳುವಷ್ಟು ದಡ್ಡನಲ್ಲಾ ನಾನು. ಹೋಗು, ಸಂಕಪ್ನ ಕರ್‍ಕೊಂಡ ಬಾ.

ಮುದ್ದಜ್ಜ—ಬ್ಯಾಡ ಬುದ್ದೀ, ನಾನು ನಿಮ್ಮ ಕೈಕಾಲು ಬಿದ್ದು ಕೇಳ್ಕೋತೀನಿ, ಈ ಲಗ್ನಾ ನಿಲ್ಸಿಬಿಡಿ.

ಗಿರಿಯಪ್ಪ—(ಕೆನ್ನೆಯ ಮೇಲೊಂದು ಚೆನ್ನಾಗಿ ಹೊಡೆದು) ಸಾಕು ನಿನ್ನ ಅಧಿಕ ಪ್ರಸಂಗ. ಹೋಗು, ಹೇಳಿದಷ್ಟು ಕೆಲ್ಸಾ ಮಾಡು.

ಮುದ್ದಜ್ಜ—(ಕೆನ್ನೆಯನ್ನು ಸವರಿಕೊಳ್ಳುತ್ತಾ) ಆಗಲೀ, ಕರೀತೇನೆ ಬುದ್ದೀ. (ಹೋಗುವನು)

ಗಿರಿಯಪ್ಪ—ಹೋಗು ಹೋಗು, ಅಧಿಕ ಪ್ರಸಂಗ ಬಹಳ ಮಾಡ್ಬೇಡ ಇನ್ನು ಮೇಲೆ. ಮೂರ್ಖನೆಲ್ಲೋ! ಹಣ್ಣು ಗಡ್ಡಾ ತೋರ್‍ಸಿ ನನಗೇ ಬುದ್ಧೀ ಕಲ್ಸತಾ ಇದ್ದಾನೆ ಈಗ. ಇದು ಅನ್ನಾ ಹಾಕಿ ಸಾಕಿದ್ದರ ಪ್ರತಿಫಲ.

ಮುದ್ದಜ್ಜ—(ಮರಳಿ ಬಂದು) ಬುದ್ದೀ! ತಿಮ್ಮಪ್ಪ ಸಂಕಪ್ಪನೋರನ್ನ ಕರ ಕೊಂಡು ಬಂದ.

(ತಲವಾರನು ಸಂಕಪ್ಪನನ್ನು ಕರೆದುಕೊಂಡು ಬರುವನು.)

ಗಿರಿಯಪ್ಪ—ಬಾರಪ್ಪಾ ಸಂಕಪ್ಪಾ, ಕೂತುಕೋ. (ಗಂಭೀರ ಧ್ವನಿಯಿಂದ) ಮುದ್ದಪ್ಪಾ, ಆ ತಿಮ್ಮನನ್ನು ಕರಕೊಂಡು ಹೋಗಿ ಒಳಗೆ ಊಟಕ್ಕೆ ನೀಡಲಿಕ್ಕೆ ಹೇಳು ಹೋಗು. ತಿಮ್ಮಾ! ಊಟಾ ಮಾಡ್ಕೊಂಡೇ ಹೋಗು, ಏನು? (ತಲೆಯಾಡಿಸುತ್ತ ಹೋಗುವರು)

ಮುದ್ದಜ್ಜ—ಆಗಲ್ರೀ ಬುದ್ದೀ. (ತಿಮ್ಮನನ್ನು ಕರೆದುಕೊಂಡು ಹೋಗುವನು.)

ಗಿರಿಯಪ್ಪ—ಸಂಕಪ್ಪಾ ! ಏನು ಬಹಳಾ ಕೆಲ್ಸಾ ಇತ್ತ್ತೋ ಏನೋ ಹೊಲ್ದಲ್ಲಿ ! ನೀವೇನ್ರಪ್ಪಾ, ಒಂದು ಕ್ಷಣವೂ ಕುಳಿತಿರೋಲ್ಲ. ತೊಂದ್ರೆ ಆಯ್ತೇನು ಕರ್ದದ್ದು ?

ಸಂಕಪ್ಪ—ಅದೇನ್ತೊಂದ್ರೆ ಸಾವ್ಕಾರ್ರೇ ! ಆದ್ರೆ ಈಗ ಒಳ್ಳೇ ಹಂಗಾಮಿಯು ಕಾಲಾ, ಹೊಲ್ದಲ್ಲಿ ಈಗ ಮೈಮುರಕೊಂಡು ದುಡ್ದರೆ ನಾಳೆ ನಾಲ್ಕು ಕಾಳು, ಮನೇಲೇ ಕುಂತ್ರೆ ಹೊಟ್ಟೆ ಹ್ಯಾಂಗ್ ತುಂಬತ್ತೆ – ಧಣಿಯ ಸಾಲಾ–ಕೇಣೇ ಹ್ಯಾಂಗ್ ಕೊಡಲಿಕ್ಕೆ ಬರತ್ತೆ ಹೇಳಿ ನನ್ನೊಡೆಯಾ ?

ಗಿರಿಯಪ್ಪ—ನೀನ್ಯಾಕ ದಣೀತಿ ಸಂಕಪ್ಪಾ ? ಇದಾನಲ್ಲಾ ಮನೆಯಲ್ಲ ದುಡಿಯಲಿಕ್ಕೆ ಆ ನಿನ್ನ ಅಳಿಯ .... ಸಾಲದೇನು ಆತ ? ಉಂಡದ್ದಕ್ಕೆ ಅಷ್ಟೂ ಕೆಲ್ಸ ಮಾಡಬಾರದೇ ?

ಸಂಕಪ್ಪ—ಹೌದು ನನ್ನೊಡೆಯಾ ? ಆತ ನನ್ನ ಬೆನ್ನೀಗೆ ನಿಂತಮ್ಯಾಗೇ ನನ್ನದೊಂದು ಮನೇ ಅಂತಾಗಿದೆ ; ನಾನೊಬ್ಬ ಮನುಷ್ಯಾ ಅಂತಾದೆ. ಅದ್ಕೇ ಆತ್ನ ಹಿಂದೆ ನಾಲ್ಕು ಸುತ್ತು ಸುತ್ತಿದೇ ಅಂದ್ರೆ ಅವನೀಗೂ ಒಂದು ಉಲ್ಲಾಸಾ.

ಗಿರಿಯಪ್ಪ—ಅದು ನಿಜವೇ ಅನ್ನು. ಇರಲೀ ಈ ವರ್ಷದ ನಿನ್ನ ಬೆಳೀ ಹ್ಯಾಂಗದೆ ? ಅನ್ಕೂಲವಾಗಿದೆಯೋ ಇಲ್ಲವೋ ?

ಸಂಕಪ್ಪ—ಬೆಳೆ ಏನೋ ಅನ್ಕೂಲವಾಗಿದೆ. ನನ್ನ ಒಂದು ಹೊಲ್ದ ಕಾಳೇ ಕೇಣೇ ಎಲ್ಲಾ ಕೊಡೋಕೆ ಸಾಕಾದೀತೂ ಅಂತ ಅನ್ಸತ್ತೆ. ಆದ್ರಿಂದ್ಲೇ ಈ ವರ್ಷ ಧಣಿಯೋರದೊಂದು ಸಾಲಾ ತೀರ್ಸಿ ಮುಂದೆ ಪುನಃ ತಮ್ಗೇ ಕಷ್ಟ ಕೊಡಬೇಕೂ ಅಂತಿದ್ದೇನೆ.

ಗಿರಿಯಪ್ಪ—ಅದಕ್ಯಾಕಪ್ಪಾ ಇಷ್ಟು ಯೋಚ್ನೆ ! ನನ್ನ ಸಾಲವೇ ಒಂದು ಮಹಾ ಭಾರಾ ಅಂತ ತಿಳೀಬೇಡ ನೀನು. ನಿನ್ನನುಕೂಲ ನೋಡ್ಕೊಂಡು ತೀರ್ಸತಾ ಬಾ.

ಸಂಕಪ್ಪ—ತಮ್ಮ ದೊಡ್ಡ ಮನಸ್ಸೀಗೆ ಹಾಗೆ ತೋರೋದೇನೋ ನಿಜ, ಆದ್ರೆ ಸಾಲಾ ಅಂಬೋದು ಹ್ಯಾಗೂ ಸಾಲವೇ ಅಯ್ಯಾ. ಇನ್ನೇನು, ನನ್ನ ಪ್ರಾಯ ಕಳೀತು, ಆಗಲೇ ಗಂಗವ್ವನೂ ಪ್ರಾಯಕ್ಕೆ ಬಂದುಕುಂತವ್ಳೆ; ಆದ್ರಿಂದ ಈಗಿದೊಂದು ಸಾಲಾ ತೀರ್ಸ್ಕಿ ಅವಳ ಲಗ್ನಕ್ಕೆ ಪುನಃ ತಮಗೇ ತಗಾದೆ ಕೊಡಬೇಕಂತಿದ್ದೇನೆ ಬುದ್ದೀ.

ಗಿರಿಯಪ್ಪ—ಹಾಗಾದ್ರೆ ವರ ಎಲ್ಲಾದ್ರೂ ನೋಡಿದ್ದೀಯೇನು ? ತಿಳಿಸಿಯೇ ಇಲ್ಲವಲ್ಲ ನನ್ಗೆ.

ಸಂಕಪ್ಪ—ಗಂಡು ಮನೆಯಲ್ಲೇ ಉಂಟಲ್ಲ ಧಣಿಯೋರೇ ! ಚನ್ನನಂಥಾ ಮನೇ ಅಳಿಯನ್ನ ಬಿಟ್ಟು ಇನ್ನ ಜೇರೆಲ್ಲಿ ಗಂಡು ಹುಡುಕುತಾ ಹೋಗಲೀ ನಾನು.

ಗಿರಿಯಪ್ಪ—ಯಾರು ಚನ್ನನೇ! ನಿಮ್ಮ ಗಂಗೀಗೇ ? ಅಂ-ಹಾ ! ಸಂಕಪ್ಪಾ, ನಾನು ಕೆಲವು ದಿವಸಗಳ ಕೆಳಗೆ ಅವಳನ್ನ ನಿಮ್ಮನೇಲಿ ನೋಡ್ದೆ; ನಿಜವಾಗಿಯೂ ಅವಳು ಬಹಳ ಸುಲಕ್ಷಣವಂತೆ. ಅವಳ ಭಾಗ್ಯದಲ್ಲಿ ಯಾರಾದರೊಬ್ಬರು ಶ್ರೀಮಂತರ ಕೈ ಹಿಡಿಯುವ ಪುಣ್ಯ ಉಂಟೇ ಹೊರತಾಗಿ ಸಾಮಾನ್ಯರನ್ನಲ್ಲ. ಆ ನಿಮ್ಮ ಚನ್ನನಿಗೆ ಸರಿಯಾಗಿ ನಾಲ್ಕು ಮಾತಾಡೋಕೆ ಬರೋದಿಲ್ಲ ; ಅಂಥವನಿಗೆ ಮಗಳನ್ನು ಕೊಡ್ತೇನೆ ಅಂತೀಯಲ್ಲಪ್ಪಾ ! ನಿನಗೇನು ಹಳತೀನ ಕಾಲದ ಹುಚ್ಚು ಗಿಚ್ಚು ಹಿಡಿದದೇನು ?

ಸಂಕಪ್ಪ—ಸಾಕು ಬುದ್ದೀ, ನನ್ನ ಗಂಗವ್ವನಿಗೆ ಆ ಚನ್ನನೇ ಸಾಕು. ಪರಮೇಶ್ವರ ಕಣ್ಣುಬಿಟ್ಟರೆ ಆ ನನ್ನ ಚನ್ನನೇ ನೀವಂದಂತೆ ಒಂದು ಕಾಲಕ್ಕೆ ಶ್ರೀಮಂತ ಯಾಕಾಗ್ಬಾರ್ದು ? ಇದು ನಾನು ಮಾಡಿದ್ದಲ್ಲ, ಶಿವನ ಸಂಕಲ್ಪ.

ಗಿರಿಯಪ್ಪ—(ಸ್ವ) ಚನ್ನನ ಹುಚ್ಚು ಚನ್ನಾಗಿಯೇ ಹತ್ತಿದೆ ಮುದುಕನಿಗೆ. ಈಗ ನಾನೂ ಮೈಮರೆತು ಕುಳಿತೇ ಅಂದ್ರೆ ಗಂಗೆ ನನ್ನ ಕೈ ತಪ್ಪುವುದು ನಿಜ. ಆದ್ರಿಂದ ಈಗಲೇ ಹೇಳಿಬಿಡ್ತೇನೆ ಸಂಕಪ್ಪನೀಗೆ. (ಕೈಯಲ್ಲಿ

ಪ್ರೋನೋಟನ್ನು ತೆಗೆದುಕೊಂಡು) ಸಂಕಪ್ಪಾ! ತೆಗೆದುಕೋ ಈ ಪ್ರೊನೋಟನ್ನ. ನನ್ಗೆ ಎಲ್ಲಾ ಹಣವೂ ಬಂತು ಅಂತ ಷರಾ ಬರ್ದುಕೊಡ್ತೇನೆ ಇದ್ರ ಮೇಲೆ. ನೀನು ಈ ಮೊದ್ಲು ಅಡ್ವು ಮಾಡಿಕೊಟ್ಟ ನಿನ್ನ ಮನೆಯನ್ನೂ ನಾಳೇನೇ ನಿನ್ನ ಹೆಸರೀಗೆ ವಾಪ್ಸು ಬರ್ದುಹಾಕ್ತೇನೆ. ಕೇಳೂ, ಇಷ್ಟೇ ಅಲ್ಲ – ಇನ್ನೂ ನಿನಗೆ ಯಾವದೇ ರೀತಿಯಿಂದ ಸಹಾಯ ಮಾಡಲಿಕ್ಕೂ ನಾನು ಸಿದ್ಧನೇ ಇದ್ದೇನೆ. ಆದರೆ .... ಹಿಡೀ ....

ಸಂಕಪ್ಪ—(ನಡುಗುತ್ತಿರುವ ಕೈಗಳಿಂದ ಪ್ರೋನೋಟನ್ನು ಹಿಡಿದುಕೊಂಡು) ಇದೇನ ನನ್ನೊಡೆಯಾ ?

ಗಿರಿಯಪ್ಪ—ಸಂಕಪ್ಪಾ! ಹಿಂದಿನಿಂದ ನಡೆದುಕೊಂಡು ಬಂದ ಮನೆ ಇದು, ಇಂದು ಹಾಳಾಗುವ ಕಾಲ ಬಂದಿದೆ. ಮನೆಯಲ್ಲಿ ಮುಂದೊಂದು ದೀಪ ಉರಿಯುವ ಸ್ಥಿತಿ ನನಗೆ ತೋರುವುದಿಲ್ಲ. ಆದ್ರಿಂದ ನೀನು ಮನಸ್ಸು ಮಾಡಿದ್ರೆ ಹಿರಿಯರ ಈ ಮನೆ ಉಳಿಯುತ್ತೆ.

ಸಂಕಪ್ಪ—ಅರ್ಥವಾಗಲಿಲ್ಲ ನನ್ನೊಡೆಯಾ.

ಗಿರಿಯಪ್ಪ—ಸಂಕಪ್ಪಾ ? ನಿನ್ನ ಮಗಳು ಗಂಗೆಯನ್ನು ನಾನು ಮದ್ವೇ ಮಾಡ್ಕೋಬೇಕಂತಿದ್ದೇನೆ; ಹೇಳು—ಇದಕ್ಕೇನು ನಿನ್ನ ಅಭಿಪ್ರಾಯ ?

ಸಂಕಪ್ಪ—ಇದೇನು ಸಾಹುಕಾರ್ರೇ! ಮುದ್ಕನಲ್ಲಿ ನಗಚಾಟ್ಕೆ ಮಾಡ್ತೀರೇನು ? ಯಾರಾದ್ರೂ ಕೇಳಿದ್ರೆ ಏನಂದಾರು! ನನ್ನ ಮಗಳು! ನಿಮ್ಗೆ ?

ಗಿರಿಯಪ್ಪ—ಹೌದು ಸಂಕಪ್ಪಾ! ನಿನ್ನ ಮಗಳೇ ನನ್ಗೆ ಬೇಕು, ಇದೇನು ಹಾಸ್ಯಕ್ಕಾಗಿ ಅಂತಾ ಇಲ್ಲ ನಾನು.

ಸಂಕಪ್ಪ—ಏನನ್ನಲೀ ಬುದ್ದೀ ನಾನು! ನಾಯನ್ನ ತಕ್ಕೊಂಡ್ಹೋಗಿ ತಾವು ದೇವ್ರ ಕೋಣೆ ಸೇರ್ಸುವ ಯೋಚನೆಯಲ್ಲಿದ್ದೀರಿ. ಬೇಡ ನನ್ನೊಡೆಯಾ, ನಾವು ನಿಮ್ಮ ಸೇವಕರು, ಬಚ್ಚಲು ಚರಂಡೀ ಬಾಚುವ ದಾಸರು. ಪಾಪವಾಸ್ನೆ ಈ ಮಕ್ಕಳಲ್ಲಿ ಬೇಡ ನನ್ನ ಸ್ವಾಮೀ.

ಗಿರಿಯಪ್ಪ—ಇಲ್ಲ ಸಂಕಪ್ಪಾ ! ಸೇವಕರಾದರೇನಾಯ್ತು – ಒಡವರಾದ ರೇನಾಯ್ತು ? ಉತ್ತಮವಾದ ವಸ್ತು ಎಲ್ಲಿದ್ದರೂ ಗ್ರಾಹ್ಯವೇ.

ಸಂಕಪ್ಪ—ಸ್ಮಶಾನದ ಮಲ್ಲಿಗೆ ಮಹದೇವನ ಪೂಜೇಗೆ ಬರೋದಿಲ್ಲ ನನ್ನ ಧಣಿಯೇ. ಮೋಹದಿಂದ ಒಪ್ಪತ್ತಿಗಿಲ್ಲದ ತಿರುಕಳನ್ನು ಸುಪ್ಪತ್ತಿಗೆ ಗೇರಿಸಿ ಹಿರಿಯರ ಆ ಕೀರ್ತಿಗೆ ಕಲಂಕ ತರಬೇಡಿರಿ ನನ್ನೊಡೆಯಾ ! ನಾನು ಹಣ್ದ ಆಶೆಗೆ ಬಿದ್ದು ನಿಮ್ಮಂತೇ ಒಪ್ಪಿದ್ರೇ ನಿಮ್ಮ ಹಿರಿಯರು ಸ್ವರ್ಗದಿಂದಲೇ ನನ್ನನ್ನ ಶಪಿಸಿಯಾರು ! ಈ ಉಂಡ ಮನೆಗೆಂದೂ ಕಪ್ಪು ಹಚ್ಚುವಂತೆ ಮಾಡಬೇಡ್ರಿ ದಣಿಯೇ.

ಗಿರಿಯಪ್ಪ—ಇದ್ರಲ್ಲಿ ತಪ್ಪೇನಿದ್ಯೋ ನಿನ್ನದೂ ಸಂಕಪ್ಪಾ ? ನಾನೇ ಸಂತೋಷ ದಿಂದ ನಿನ್ನ ಮಗಳ ಕೈ ಹಿಡಿದು ಕರೆಯುತ್ತಿರುವೆನಲ್ಲಾ !

ಸಂಕಪ್ಪ—ಆದ್ರೂ ನನಗೀ ಸಂಬಂಧ ಬೇಡ ನನ್ನೊಡೆಯಾ ! ನಾಳೆ ಲೋಕ ನನ್ಗೇನಂದೀತ್ಹೇಳ್ರಿ. ಸಂಕಪ್ಪ ಅಳಿಯನಿಗೆ ಹೆಣ್ಣು ಕೊಡ್ತೇನಂತ ನಂಬುಗೆ ಹುಟ್ಸಿ ದುಡ್ಸಿಕೊಂಡು ಆಮೇಲೆ ಆತನ್ನ ಹೊರ್ಗೆ ನೂಕಿದಾ ಅಂತ ಅನ್ನಲಿಕ್ಕಿಲ್ಲವೇ ಹೇಳ್ರಿ. ಧಣಿಯೇ ! ನಾನೆಂದೂ ಚನ್ನನೀಗೆ ದ್ರೋಹಾ ಮಾಡಲಾರೆ ; ಕೂಡಿದ ಪ್ರೇಮವನ್ನ ಅಳ್ಸಿ, ಪಾಪವನ್ನ ತಲೇವ್ಯಾಲೆ ಹೊತ್ಕೊಳ್ಳಾರೆ. ಅದು ನನ್ಗೂ ನಿಮ್ಗೂ ಇಬ್ಬರಿಗೂ ಶ್ರೇಯಸ್ಸಲ್ಲ !

ಗಿರಿಯಪ್ಪ—ಸಂಕಪ್ಪಾ ! ಬರಿದೇ ವಾದಿಸಬೇಡ ನನ್ನ ಕೂಡ. ಚನ್ನಪ್ಪನ ಬಗ್ಯೆ ಚಿಂತೆ ಮಾಡ್ಬೇಡ ನೀನು. ಅತನೀಗೆ ಸರಿಯಾದ ಹೆಣ್ಣು ಹುಡುಕಿಸಿ ನಾನೇ ಲಗ್ನ ಮಾಡ್ತೇನೆ ; ಇನ್ನಾದ್ರೂ ಆಯ್ತಲ್ಲಾ.

ಸಂಕಪ್ಪ—ನೀವೇನೇ ಹೇಳ್ರಿ ಬುದ್ದೀ, ಇದಕ್ಕೆ ನನ್ನ ಒಪ್ಪಿಗೆ ಇಲ್ಲ. ಈ ಸಂಬಂಧವೂ ಬೇಡ ಧಣಿಯೇ ನನಗೆ. ಸಿಂಹ ಹುಲ್ಲು ತಿನ್ನಕೂಡ್ದು– ಇರುವೆ ಬೆಂಕಿಯಲ್ಲೂ ಧುಮ್ಕಬಾರ್ದು ನನ್ನ ತಂದೇ. ತಗೊಳ್ಳೀ ಈ ನಿಮ್ಮ ಕಾಗ್ದ ; ನನ್ನ ಜೀವೊಂದಿದ್ರೆ ಇದರ ಹಣ ಈ ಸುಗ್ಗಿಯಲ್ಲೇ

ತೀರ್ಸ್ತೇನೆ. ಒಡ್ಡನ ಮೇಲೆ ಸಿಟ್ಟಾಗಬೇಡಿ ನೀವು .... ಬರ್ತೇನೆ, ನಮಸ್ಕಾರ. (ಹೋಗುವನು)

ಗಿರಿಯಪ್ಪ—ಸಂಕಪ್ಪಾ! ನಿನ್ನ ಹಣಾ ನೂರೈವತ್ತಲ್ಲ-ಮುನ್ನೂರು, ಜ್ಞಾಪ್ಕ ಇದೆಯೇನು?

ಸಂಕಪ್ಪ—ಧಣಿಯ ಇಚ್ಛೆ. ದೇಹದಲ್ಲಿ ಪ್ರಾಣ ಇರುವವರೆಗೂ ದುಡ್ದು ಋಣ ಮುಕ್ತನಾಗ್ತೇನೆ. ಒಂದೊಮ್ಮೆ ಆಗ್ದೇ ಇದ್ರೂ ಚನ್ನ-ಗಂಗಿಯರಾದ್ರೂ ನಿಮ್ಮ ಸಾಲವನ್ನ ತೀರ್ಸಿಯಾರು-ಬರ್ತೇನೆ. (ಹೋಗುವನು)

ಗಿರಿಯಪ್ಪ—ಹೋಗು ಹೋಗು, ಹುಚ್ಚ ನಾಯಿ! ನಿನ್ನ ಹಣೆಯಲ್ಲಿ ಸುಖ ಅನುಭವಿಸೋದೇ ಇಲ್ದಿರುವಾಗ ಅದ್ಕೆ ಯಾರೇನು ಮಾಡಲಿಕ್ಕೆ ಬರ್ತ್ತೆ! ಅನುಭವಿಸು. ಈ ಗಿರಿಯಪ್ನ ಶಕ್ತಿ ಎಷ್ಟುಂಟಂತಾ ಆಮೇಲೆ ನೀನೇ ನೋಡ್ತೀಯಂತೆ. ಅಂತೂ ಒಂದು ದಿನ ನಿನ್ನ ಗಂಗೆ ನನ್ನ ಪತ್ನಿ ಯಾಗಲೇಬೇಕು. ಪತ್ನಿ....ಅಲ್ಲದಿದ್ದರೆ ಉಪಪತ್ನಿ. ಅದ್ರಲ್ಲೂ ಬಾಧಕ ವೇನು? ಹೇಗೂ ನನ್ನ ಇಚ್ಛೆಯೊಂದು ನೆರವೇರಿದರೆ ಸರಿ. ನಿನ್ನೆದೆಯ ಸೊಕ್ಕೇನಿದೆಯೋ ನಾನೂ ನೋಡ್ತೇನದನ್ನ.

ರಾಗ: ಛಾಯಾನಟ–ತ್ರಿಕಾಲ

ಸೈಸೆ ಸೈಸೆ ನಾನೀ ಕ್ಲೇಶ | ನಾಶವಗೈವೆ ನೀಚನ ಭ್ರಾಂತಿ || ಧ್ರು ||
ಒಡಲೀನ ಗರ್ವ ತಡಮಾಡದೀಗ | ಬಡಿದೋಡಿಸುತ್ತೆ –
ಪಿಡಿತರುವೆ ಸತಿಯ || ೧ ||

(ಹೋಗುವನು)

[ತೆರೆ ಬೀಳುವುದು]

## ನೋಟ ೬

[ಸಾಹುಕಾರನ ಮನೆಯ ಮುಂದಿನ ಅಂಗಳ. ಮುದ್ದಜ್ಜನು ದುಃಖದಿಂದ ಪ್ರವೇಶಿಸುವನು.]

ಮುದ್ದಜ್ಜ— ಇದೂ ಒಂದು ಸೇವೆಯ ಭಾಗ್ಯ ; ಸುಖದ ತಿಸಿಸು ! ಆದ್ರೇನು ಮಾಡ್ಲಿ ? ಈ ನನ್ನ ಉಪ್ಪುಂಡ ಮನೆಗಾಗಿ, ಆ ನನ್ನ ಹಿರಿಯರ ಪ್ರೇಮಕ್ಕಾಗಿ ನಾನು ಸುಮ್ಮನಿರ್ಲೇಬೇಕು. ಸಾಯೋವಾಗ ಚನ್ನ ಬಸಪ್ಪನವರೇನಂದ್ರು ? ಮುದ್ದಪ್ಪಾ ! ನನ್ನ ಮಗನ ಆರೈಕೆ ನಿನ್ನದೂ; ನನ್ನ ಮನೇ ಹಿತಾ ನಿನ್ನದೂ ; ಹುಡುಗನಿನ್ನೂ ವ್ಯವಹಾರಶೂನ್ಯಾ ಅಂದ್ರಲ್ಲಾ. ಹೌದು, ಗಿರಿಯಣ್ಣ ತಾನೆಷ್ಟೇ ಬುದ್ಧಿವಂತ ಅಂತ ತಿಳ್ಕೊಂಡಿದ್ರೂ ನನ್ನ ಮುಂದೆ ಮಗುವೇ. ಹಾಗಂದ ಮೇಲೆ ಅವನೀ ಪೆಟ್ಟಿಗೆ-ಬೈಗಳಿಗೆ ಸಿಟ್ಟಾಗಿ ನಾನು ಮನೇ ಬಿಟ್ಟು ಹೋಗಲೇ ? ಅದೆಂದಿಗೂ ಶಕ್ಯ ಇಲ್ಲಾ. ಆಗ್ಲಿ, ಇನ್ನೆಷ್ಟು ದಿನ ನನ್ನ ಬಾಳು ? ನನ್ನ ಕಣ್ಮುಂದೆ ಮಾತ್ರ ಆತನಿಗೆಂದೂ ಅನಿಷ್ಟ ಆಗದ್ಹಾಂಗೆ ನೋಡ್ಕೊಳ್ಳೋದು ನನ್ನ ಕರ್ತವ್ಯ. ಹೇಳ್ತೀನೆ, ಇನ್ನೂ ಹೇಳ್ತೀನೆ, ಮತ್ತೂ ಹೇಳ್ತೀನೆ. ಉಂಡ ಮನೇ ಋಣ ತೀರ್ಸಲಿಕ್ಕೇ – ಉಪ್ಪನ್ನವನ್ನ ಕೊಟ್ಟ ಹಿರಿಯರಿಗಿತ್ತ ವಚನ್ನಾ ಪಾಲ್ಸೇ ಮಾಡ್ಲಿಕ್ಕೆ ಬಂದ ಸಂಕಟಗಳನ್ನೆಲ್ಲಾ ಸಹಿಸಿ ದುಡೀತೇನೆ ; ಮುಂದೆ ದೈವಯತ್ನ. ಹಾಂ....ಇದ್ಯಾರು ? ಸಂಕಣ್ಣ ! ಇವ್ನೂ ಬಲು ಚಿಂತೆಯುಂದ್ಲೇ ಬಂದ್ಹಾಗೆ ಕಾಣತ್ತಲ್ಲಪ್ಪಾ ! ನನಗೆ ಬಂದ ಆಪತ್ತೇ ಅವನಿಗೂ ಬಂತೇನಪ್ಪಾ !

ಸಂಕಪ್ಪ—(ಪ್ರವೇಶಿಸಿ) ಈ ಕೆರೆ ಭಾವಿಗಳ ಮಧ್ಯೆ ನನ್ನನ್ನೇಕೆ ತಳ್ಳಿದಿಯಪ್ಪಾ ನನ್ನ ದೇವರೇ ! ಈ ಹಾವು ಹುಲಿಗಳ ಮಧ್ಯೆ ನನ್ನನ್ನೇಕೆ ದೂಡಿದೆಯಯ್ಯಾ ಪರಮೇಶ್ವರಾ ! ಈ ಶ್ರೀಮಂತರ ಕ್ರೂರ ಸಾಲದ ಉರುಳೊಳಗೆ ನನ್ನನ್ನೇಕೆ ಸಿಕ್ಕಿಸಿದೆಯಯ್ಯಾ ನನ್ನ ಗುರುವೇ ! ಈಗ ನಾನು ಪಾರಾಗೋ ಹಾದಿ ಯಾವದು ? ಮುಂದೆ ಸಾಲದ ಹೊರೆ ! ಶ್ರೀಮಂತ್ರ ಅಪಕೃಪೆಯನ್ನ ಕಂಡು ಹಿಂದ್ಕೊರಳಿದ್ರೆ ಬೆನ್ನು ಹತ್ತಿ ಬಂದಿರುವ ಈ ನನ್ನ ಪ್ರೇಮದ ಅಳಿಯನ ದೀನ ಮುಖಾ – ಅವನನ್ನೇ ಹಿಂಬಾಲಸ್ತಾ ಬರ್ತಾ ಇರುವ ಆ ನನ್ನ ಗಂಗೆಯ ನಿಷ್ಕಲ್ಮಷ ಎದೆ ನನ್ನ ಕರಳನ್ನು ಕತ್ತರಿಸುತ್ತೆ. ಇವುಗಳಲ್ಲಿ ಯಾವುದನ್ನ ನಾನು ಹಿಡಿಯಲಿ–ದಾರೀ ತೋರ್ಸು. (ಹೊರಡುಹನು)

ಮುದ್ದಜ್ಜ--ಸಂಕಣ್ಣಾ ! ಸಂಕಣ್ಣಾ !!

ಸಂಕಪ್ಪ—(ಹಿಂದೆ ತಿರುಗಿ ನೋಡಿ) ಅಯ್ಯೋ ! ಯಾರು, ಮುದ್ದಜ್ಜಾ ! ಪುನಃ ಶ್ರೀಮಂತ್ರ ಹಣ್ದ ವಸೂಲಿಯ ಆಳೇ ನನ್ನ ಹಿಂದೆ ........ ಮುದ್ದಜ್ಜಾ! ಹೇಳು ನಿನ್ನ ಸಾವಕಾರ್ರಿಗೆ .... ಕಣ್ದ ಸುಗ್ಗಿಯಾಗ್ತಲೇ ಅವ್ರ ಹಣಾ ಒಂದು ಚಿಕ್ಕಾಸೂ ಇಲ್ದೇ ಮುಟ್ಟಿಸ್ತೇನೆ ಅಂತ. ಅಯ್ಯೋ! ಅವರ ಋಣದ ಬಾಧೆ – ನನ್ನೆದೇಲಿ ಶೂಲಾ ಹಾಕಿ ಇರೀತಿದ್ಯಲ್ಲಪ್ಪಾ ! ಅಯ್ಯೋ ! ನಾನಿಲ್ಲಿರಲಾರೆ. (ಓಡುವನು)

ಮುದ್ದಜ್ಜ—ಹೌದು, ಸಂಕಣ್ಣ ಗಿರಿಯಣ್ಣನಿಂದ ಬಹು ನೊಂದುಕೊಂಡು ಬಂದ; ಇವನೀ ವ್ಯಥೆ ಸಹಿಸೋದೇ ಕಷ್ಟವಾಗಿದೆ. ಆದ್ರೆ ಇವನಿಗೆ ಬಿದ್ದ ಪೆಟ್ಟು ಬೆನ್ನೀಗಲ್ಲ–ಹೊಟ್ಟೀಗೆ. ಹೊಟ್ಟೀಗೆ ಬಿದ್ದ ಪೆಟ್ಟು ಸಹ್ಸಿ ಕೊಳ್ಳೋದ್ಯಾಂಗಪ್ಪಾ ! ಸಂಕಣ್ಣಾ ! ಸಂಕಣ್ಣಾ ! ಅಳಬೇಡ ನೀನು, ಅಳ್ಬೇಡ. ನಿನ್ನ ಕಣ್ಣೀರು, ಒಕ್ಕಲಿಗ್ರ ಕಣ್ಣೀರು ಸಾಹುಕಾರನೀಗೆ ಹಿತ ವಲ್ಲಪ್ಪಾ ! ನಿಮ್ಮ ಕಷ್ಟದ ಬೆವ್ರಹನಿಯಿಂದ್ಲೇ ಈ ಮನೆಯ ಒಂದೊಂದು ಕಲ್ಲೂ ಕಟ್ಟಿದ್ದು ಕಾಣ್ರಪ್ಪಾ. ನಿಮ್ಮ ರಕ್ತದ ಒಂದೊಂದ್ಹನೀ ಧಾರೆ ಯಿಂದ್ಲೂ ಇದ್ರ ಗಾರೆ ಆಗಿದೆ ಕಾಣ್ರಪ್ಪಾ. ಈ ಮನೇ ಭಾರಾ ಹೊತ್ತೇ, ಸಾವ್ಕಾರ್ರ ಒದೇ ತಿಂದೇ ನಿಮ್ಮೈ ಮುರ್ದ್ಹೋಗೀದ್ರಪ್ಪಾ. ಆದ್ರೂ ಅಳ್ಬೇಡ ಸಂಕಣ್ಣಾ....ನಿಮ್ಮ ಕಣ್ಣೀರು ಈ ಮನೇನ–ಸಾವ್ಕಾರೀ ಸೌಧ ವನ್ನ ಬುಡಸಮೇತ ಕಿತ್ತು ಕೊಚ್ಚಿಕೊಂಡುಹೋಗುವುದು ಕಾಣ್ರಪ್ಪಾ ! ನಿಮ್ಮೊಡಲೀನ ಬೆಂಕಿ ಈ ಮನೇನ ಸುಟ್ಟು ಬೂದಿ ಮಾಡೋದು ಕಾಣ ನನ್ನ ಸಂಕಣ್ಣಾ ! ಆದ್ರಿಂದ ದಯವಿಟ್ಟು ನೀನು ಸಿಟ್ಟುಮಾಡ್ಬೇಡ, ದಯವಿಟ್ಟು ನೀನಳಬೇಡ. ನೀನು ಕಟ್ಟಿದ ಮನೆಯನ್ನ, ನಿಮ್ಮಿಂದಾದ ಸಂಪತ್ತನ್ನ ನೀವೇ ಹಾಳ್ಮಾಡಬೇಡ್ರಿ ಸಂಕಣ್ಣಾ ! ನಾನು ನಿಮ್ಮ ದಮ್ಮಯ್ಯಗುಡ್ಡೆ ಬಿದ್ದು ಪ್ರಾರ್ಥನೆ ಮಾಡ್ತೇನೆ; ಸಂಕಣ್ಣಾ, ಅಳ್ಬೇಡ. ಅಯ್ಯೋ ! ಸಂಕಣ್ಣ ಹೋಗಿಯೇಬಿಟ್ಟನಲ್ಲಾ ! ಇನ್ನೇನ ಮಾಡ್ಲಿ ನಾನು ? ನನ್ಮಾಗವನಿಗೆ ಕೇಳಲೇ ಇಲ್ಲಾ. ನನ್ಮಾತವನ್ನ ಕಿವೀಗೆ ಬಿದ್ದೇ ಇಲ್ಲಾ. ನನ್ನೀ ಮುದಿಪ್ರಾಯದಲ್ಲಿ ಇನ್ನೇನೆಲ್ಲಾ ನೋಡ್ಬೇ

ಕಪ್ಪಾ ನಾನು ? ಮಾದೇವಾ–ಓ ಶಿವಾ ! ನನ್ನನ್ನಷ್ಟು ತಕ್ಕೊಂಡ್ಹೋಗು, ನನ್ನ ಕಣ್ಣೆದ್ರೇ ಈ ಮನೇ ಹಾಳ್ಮಾಡ್ಬೇಡ ನೀನು ! (ಹೋಗುವನು)

[ ತೆರೆ ಮೇಲಕ್ಕೇರುವುದು ]

## ನೋಟ ೭

[ ಗಿರಿಯಪ್ಪನವರ ಮನೆ – ಸರ್ವಮಂಗಳೆಯ ಅಂತಃಪುರ. ಸರ್ವಮಂಗಳೆಯು ಪುಸ್ತಕವನ್ನು ಹಿಡಿದುಕೊಂಡು ಓದುತ್ತ ಕುಳಿತಿರುವಳು.]

ಸರ್ವಮಂಗಳೆ—ಛೇ ! ಈ ಪುಟವನ್ನೇ ಓದಿದ್ದು ಹತ್ತುಬಾರಿಯಾಯ್ತು. ಏನು ಮರವೇ ಇದೂ ನನ್ನದು, ದೃಷ್ಟಿ ಪುಸ್ತಕದಲ್ಲಿ–ಮನ್ಸು ಎಲ್ಲಿಯೋ ! ಹೀಗಾದ್ರೆ ಓದಿದ್ದು ತಲೇಗೆ ಹ್ಯಾಗೆ ಹತ್ತಬೇಕು ? ನೆನಪಾದ್ರೂ ಹ್ಯಾಗೆ ಉಳೀಬೇಕು ? ಊಹೂಂ, ಇದು ಬೇಡ ಈಗ....ಏನಾದ್ರೂ ಕಸೂತಿ ಕೆಲಸವಾದ್ರೂ ಮಾಡೋಣ. ನಿನ್ನೇ ಮಾಡಿದ ಟವೆಲ್ ಕೆಲಸ ಅರ್ಧ ದಲ್ಲೇ ನಿಂತದೆ, ಅದನ್ನೇ ಮುಂದರಸೋಣ. (ಎಂದು ಕೈಯಲ್ಲಿ ಕಸೂತಿ ಯನ್ನು ಬಿಡಿಸುತ್ತ) ಓಹೋ–ಇದ್ರ ಎಲೇ ಸ್ವಲ್ಪ ದೊಡ್ಡದ್ಯಾತು, ಹೀಗಾದ್ರೆ ಈ ಹೂವಿಗೆ ಇದು ಶೋಭೇ ಕೊಡೋದಿಲ್ಲ, ಇದನ್ನ ಸ್ವಲ್ಪ ಕತ್ತರಿಸ ಬೇಕು. (ಹುಡುಕುತ್ತ ಕತ್ತರೀ ತೆಗೆದುಕೊಂಡು) ಕತ್ತರೀ ಎಲ್ಲಿದೇ ? ಆ ಅಜ್ಜಾ ಒಬ್ಬ ನನಗೆ ಸಾರಥೀ! ಇಟ್ಟ ಸಾಮಾನು ಒಂದೂ ಇಡೋ ದಿಲ್ಲ ಸ್ಥಳದಲ್ಲಿ....ಎಲ್ಲಾ ಕಲ್ಲಾಬಿಲ್ಲಿ ಮಾಡಿಹಾಕ್ತಾನೇ .... ಏ ಅಜ್ಜಾ ! ಮುದ್ದಜ್ಜಾ !! ಎಲ್ಲಿದ್ದಿಯೋ–ಬಾರೋ ಇಲ್ಲೀ !

ಮುದ್ದಜ್ಜಾ—(ಓಡಿಬಂದು) ಏನಮ್ಮಾವ್ರಾ–ಕರ್ದರಲ್ಲಾ !

ಸರ್ವಮಂಗಳೆ—ಯಿಗಾ–ಯಿನ್ನು ಮುಂದೆ ನಾನು ಹೇಳಿಬಿಡ್ತೇನೆ ನಿನಗೆ .... ನನ್ನ ಯಾವ ಸಾಮಾನೂ ಮುಟ್ಟಬೇಡ ನೀನು, ಇದ್ದ ಸಾಮಾನೆಲ್ಲಾ ತೆಗೆದು ಸಂತೇ ಮಾಡಿಬಿಡ್ತೀ ನೀನು !

ಮುದ್ದಜ್ಜ—ಯೇನಾಯ್ತುವ್ವ್ನೇರಾ ? ಏನು ಸಾಮಾನು ಹೋಯ್ತೀಗ ? ನಾನು ಯಾವುದೂ ಒಯ್ಲಿಲ್ಲ–ಅಲ್ಲೇ ಯಿಟ್ಟಿದ್ದೀನಿ ಎಲ್ಲಾ.

ಸರ್ವಮಂಗಳೆ—ಅಲ್ಲೇ ಇಟ್ಟಿದ್ದಾನಂತೆ !........ಅಲ್ಲೇ ಇಟ್ರೆ ಪೆಟ್ಟಿಗೆ ತಿನ್ನ ತ್ತೇನೋ ? ಎಲ್ಲಿದೆ ನನ್ನ ಕತ್ತರೀ – ಕಸೂತಿ ಕೆಲ್ಸದ್ದು ? ಹುಡುಕೀ ಕೊಡು ಅದನ್ನ ನನಗೆ ಬೇಗ

ಮುದ್ದಜ್ಜ—ಯಾವುದ್ರವ್ವಾ – ಸಣ್ಣದೋ ದೊಡ್ಡದೋ ಕತ್ತರೀ ?

ಸರ್ವಮಂಗಳೆ—ನಿನ್ನ ತಲೇ ! ಚಿಕ್ಕದಪ್ಪಾ. ನನ್ನ ಕಸೂತಿ ಕೆಲ್ಸದ್ದೂ .... ಎಲ್ಲಿದೆ ಅದು ?

ಮುದ್ದಜ್ಜ—(ನಗುತ್ತ ನಿಲ್ಲುವನು) ಹ್ಹ ! ಹ್ಹ ! ಹ ! ಹ ! ಹ !

ಸರ್ವಮಂಗಳೆ—ಯಾಕೆ ನಗ್ತಿಯೋ ಹುಚ್ಚರ ಹಾಂಗೆ ! ನಿನಗೇನು ಪೀಡೆ ಪಿಶಾಚಿ ಹಿಡ್ದದೇನು ?

ಮುದ್ದಜ್ಜ—(ಮೊದಲಿನಂತೆಯೇ ಪುನಃ ನಗುವನು) ಹ ! ಹ ! ಹ ! ಹ !

ಸರ್ವಮಂಗಳೆ—ನಿನಗೇ ಮುದ್ಕ ಆಗ್ತಾ ಆಗ್ತಾ ಹುಡುಗಾಟಿಕೆ ಬರ್‍ತಿವೆ ಅಲ್ವೇನು ? ನೀನೇನು ಮಗು ಅಂತ ತಿಳ್ದಿಯೇನು ಹೀಂಗೆ ಆಡೋಕೆ ?

ಮುದ್ದಜ್ಜ —ನಾನು ಮಗೂ ಆಗಿದ್ರೇ ನನ್ನ ಯಿಲ್ಲೇ ಬಿಡ್ತಿದ್ರೇನವ್ವಾ ನೀವು ಹೀಂಗೆ ನಗಲಿಕ್ಕೆ ? ಯಿಷ್ಟೊತ್ತಿಗೆ ಬಾಚಿ ತಬ್ಬಿಕೊಂಡು ಮುದ್ದಿಟ್ಟು ನನ್ನ ಅರ್ಧ ಪ್ರಾಣಾ ತೆಗ್ದೇಬಿಡ್ತಿದ್ದಿರಿ. (ಪುನಃ ನಗು)

ಸರ್ವಮಂಗಳೆ—(ಕಿವಿ ಹಿಡಿದು ಹಿಂಡುತ್ತಾ) ನನ್ನ ಕತ್ತರೀ ಕೊಡತೀಯೋ, ನಗ ತೀಯೋ ನೀನೀಗ ?

ಮುದ್ದಜ್ಜ—ಏನ್ರವ್ವಾ ! ನಿಮ್ಮ ದೆಸಿಂದೇನು ನಾನು ಸಾಯಬೇಕಾ ಯಿವ ಬೇಕಾ ! ಕೈಯಲ್ಲೇ ಕತ್ತರೀ ಹಿಡ್ಕೊಂಡು, ಪುನಃ ಕತ್ತರೀ ಕತ್ತರೀ

ಅಂದ್ರೇ ನಾನೇನ ಕೊಡಲೀ ಕತ್ರಿಯನ್ನ? ನಿಮ್ಮಿಧ್ಯ ನನ್ನ ಜೀವವೂ ಒಂದು ಕತ್ರಿಯ ಮಧ್ಯದಲ್ಲೇ ಸಿಕ್ಕಂತಾಗಿದೆ ಈಗ!

ಸರ್ವಮಂಗಳೆ—(ಕಿವಿ ಬಿಟ್ಟು) ಅಜ್ಜಾ! ದಯವಿಟ್ಟು ಕ್ಷಮಿಸ್ತೀಯಾ? ಏನೋ ಬರ್‍ತಾ ಬರ್‍ತಾ, ನನ್ನ ಬುದ್ಧಿಯೇ ಮಂಕಾಗ್ತಾ ಇದೆ ಈಗ! ಯಾವುದೂ ನೆನಪುಳಿಯೋದಿಲ್ಲ. ಬಗಲಲ್ಲಿ ಕುರೀ ಅವುಚಿಕೊಂಡು ಕುರಿಯನ್ನ ಹುಡುಕಾಡತಿದ್ದನಂತೇ ಕುರುಬ. ಹಾಗಾಗಿದೆ ನನ್ನ ಅವಸ್ಥೆ. ಅಜ್ಜಾ....ಬೇಸರ ಬಂತೇನು ನಿನಗೆ ನನ್ನ ಮೇಲೆ? ತಗೋ ಈ ಕತ್ತರೀ ತಕ್ಕೊಂಡು ನಿನ್ನ ಕಿವೀ ಹಿಂಡಿದ ನನ್ನ ಕೈ ಬೆರಳನ್ನೇ ಕತ್ತರಿಸಿಹಾಕಿ ಬಿಡು. ಯಿಗಾ—ತಗೋ ಅಂದ್ರೆ.

ರಾಗ–ಭೀಮಪಲಾಸ್–ತ್ರಿತಾಲ

ಅಪರಾಧವಾऽऽ ಗೈದೆ | ಪಾಪಿ ನಾ ಗರುವದಿಂದೆ
ಕೃಪಾತ್ರ ನೀ | ಪ್ರೇಮದಲೀ ಕಾಯೋ ಬಾಲೆಯಾ || ಧೃ ||
ನಾ ದುರಿತೇ ಘನಹೀನ ವನಿತೆ
ಕ್ರೋಧದಿಂದಿತ್ತೇ ಬಾಧೆಯಾ
ಉದಾರ ಚರಿತನೆ ಕ್ಷಮಿಸುವುದಬಲೆಯ

ಮುದ್ದಜ್ಜ—ತಾಯಿ, ಬೇಸರ ಮಾಡಬೇಡ್ರವ್ವಾ! ನಿಮ್ಮ ಮನಸ್ಸು ಎಷ್ಟು ಮೃದೂ ಅಂತ ನಂಗೊತ್ತದೆ. ಬಡ್ವನ ಮೇಲೆ ಅವ್ರೋರಿಗೆ ಎಷ್ಟು ಕಳ್ಳೀ ಯಿದೇ ಅಂತ ನಂಗೊತ್ತದೆ. ಆದ್ರೆ ಇದು ನಿಮ್ಮ ತಪ್ಪಲ್ಲವ್ವಾ, ಮಹ ದೇವಂದು. ಆತ ನಿಮ್ಮ ಹೊಟ್ಟೇಲೊಂದು ಸಂತಾನ ಕೊಟ್ಟಿದ್ರೆ – ಈ ಯಾವ ದುಃಖಕ್ಕಾಗಲೀ, ಮರವೇಗಾಗಲೀ ಕಾರಣಾ ಇರಲಿಲ್ಲ. ಹೆಗ್ಸ್ಲಾ ಯಿರ್ರೂ ನಿಮಗೆ ಅದೇ ಚಿಂತೆಯಾಗಿ ನಿಮಗೆ ಹುಚ್ಚು ಹಿಡಿದ್ದಾಂಗೆ ಆಗಿದೆ ಈಗ, ಅದ್ಕೇ ನಾನು ಸಿಟ್ಟಮಾಡ್ಲೇನವ್ವಾ?

ಸರ್ವಮಂಗಳೆ—ಹೌದಜ್ಜಾ! ನನ್ನ ಹೃದ್ಯವನ್ನ ನೀನು ಚೆನ್ನಾಗಿ ತಿಳಿದಿದ್ದೀ. ನನ್ನ ದುಃಖ ನಿನಗೆ ಗೊತ್ತದೆ. ಆ ಒಂದು ಸಂತಾನದ ಬಗ್ಗೆ ನಾನೆಷ್ಟು

ಕಷ್ಟಪಟ್ಟೆ, ನೀನೇ ಹೇಳು. ಈ ಮನೇ ದೀಪ ನನ್ನ ಕಾಲಕ್ಕೇ ಆರಿ ಹೋಗಬಾರದೂ ಅಂತ ಎಷ್ಟು ಹೆಣಗಾಡ್ದೆ ಹೇಳು. ನಾನು ಅಡ್ಡಬೀಳ್ದೇ ಇದ್ದ ದೇವ್ರಿಲ್ಲ, ನಾನು ನಡ್ಸದೇ ಇದ್ದ ವ್ರತವಿಲ್ಲ, ನಾನು ತಿನ್ದೇ ಇದ್ದ ಔಷಧ ಇಲ್ಲ. ಮುದ್ದಜ್ಜಾ! ಆ ಸನ್ಯಾಸಿಗಳು, ಯತಿಗಳು, ವೈದ್ಯರು ಒಬ್ಬರ ಭವಿಷ್ಯಕ್ಕೂ ಬೆಲೆಯೇ ಇಲ್ಲವೇನು ಹಾಗಾದರೆ ....

ಮುದ್ದಜ್ಜ—ಅವ್ವಾ! ಹೀಗೆ ನಿತ್ಯಾ ಅಳ್ತಾ ಕುಂತ್ರೆ ಬರೋ ಭಾಗ್ಯ ಏನ್ಹೇಳ್ರಿ, ಸಮಾಧಾನ ತಕ್ಕೊಳ್ಳಿ, ದೇವ್ರು ನಡ್ಸತಾನೆ.

ಸರ್ವಮಂಗಳೆ—ಆಗಾ ಅಲ್ನೋಡು, ಹೊರಗೆ ಯಾರೋ ಬಂದಹಾಗಿದೆ, ಯಾರು ನೋಡ್ಕೊಂಡ್ಬಾ.

(ಮುದ್ದಜ್ಜನು ಹೋಗುವನು.)

ಸರ್ವಮಂಗಳೆ— ಏನು ಹೇಳ್ತಾನೆ ಈ ಅಜ್ಜಾ....ದೇವ್ರು ನಡ್ಸತಾನೆ, ಶಿವ ನಡ್ಸತಾನೆ ಅಂತ. ನನಗಂತೂ ಅಂವ ದೇವ್ರೆನ್ನುವವನೊಬ್ಬ ಇದಾನೋ ಇಲ್ಲೋ ಅಂತಾ ಸಂಶಯ ಬರ್ಲಿಕ್ಕೆ ಪ್ರಾರಂಭಿಸಿದೆ ಈಗೀಗ!

ಮುದ್ದಜ್ಜ—(ಪ್ರವೇಶಿಸಿ) ಅವ್ವಾ! ಸಂಗಯ್ಯನೋರು ಬಂದಾರೆ ಹೊರಗೆ, ಕರೀಲೇನು?

ಸರ್ವಮಂಗಳೆ—ಹೋಗಿ ಕರ್ಕೊಂಡು ಬಾಅಜ್ಜ. (ಹೋಗುವನು) ಇದೊಂದು ಕೊನೆಯ ಭವಿಷ್ಯಫಲ. ಸ್ವಾಮಿಗಳು ಚೆನ್ನಾಗಿ ತಿಳಿದವರೂ ಅಂತ ಎಲ್ಲರೂ ಹೇಳ್ತಾರೆ. ಆಗಲೀ, ಇವರೇನಂತಾರೋ ನೋಡೋಣ. (ಸಂಗಯ್ಯನವರು ಬರುವರು. ಸರ್ವಮಂಗಳೆಯು ನಮಸ್ಕರಿಸುವಳು.) ಬನ್ನಿ ಸ್ವಾಮಿಗಳೇ.... ಕೂತುಕೊಳ್ಳಿ.

ಸಂಗಯ್ಯ—ಆಗಲವ್ವಾ. (ಕುಳಿತು) ನನ್ನನ್ನು ಕರೆಯಕಳುಹಿಸಿದ ಕಾರಣ ಏನೋ?

ಸರ್ವಮಂಗಳೆ—ಸ್ವಾಮೀ, ತಾವು ಜ್ಯೋತಿಷ್ಯವನ್ನ ಚೆನ್ನಾಗಿ ತಿಳಿದಿರುವುದಾಗಿ ಕೇಳ್ದೆ. ಹಸ್ತಸಾಮುದ್ರಿಕೆಯ ಪರಿಚಯವೂ ತಮಗೆ ಚೆನ್ನಾಗಿದೆ ಅಂತ ವರ್ತಮಾನ ಸಿಕ್ಕಿತು. ಆದ್ದರಿಂದಲೇ........

ಸಂಗಯ್ಯ—ಓಹೋಹೋ - ಅದಕ್ಕೇನಂತೆ! ತಾಯಿ, ನಾನು ಜ್ಯೋತಿಷ್ಯವನ್ನೇ ಆರು ವರ್ಷ ಅಭ್ಯಾಸ ಮಾಡಿದ್ದೆ. ಜಾತಕ ಇದ್ರೆ ಕೊಡ್ರಿ, ನೋಡಿ ಹೇಳ್ತೇನೆ.

ಸರ್ವಮಂಗಳೆ—ಜಾತಕ ಒಳಗೆಲ್ಲೋ ಪೆಟ್ಟಿಗೆಯಲ್ಲಿರಬೇಕು; ನಾಳೆ ಅದನ್ನ ಮುದ್ದಜ್ಜನ ಕೈಲಿ ಕಳ್ಸ್ತೇನೆ, ದಯವಿಟ್ಟು ಚೆನ್ನಾಗಿ ನೋಡಿ ಹೇಳ್ಬೇಕು.

ಸಂಗಯ್ಯ—ಅದಕ್ಕೇನಂತೆ ತಾಯೀ. ಅಭ್ಯಾಸ ಮಾಡಿದ ವಿದ್ಯೆ ಪ್ರದರ್ಶನ ಮಾಡ್ದೇ ಇದ್ರೆ ನಾನು ಪಟ್ಟ ಶ್ರಮಕ್ಕೇನು ಫಲ? ಅಗತ್ಯ ಆಗಲಿ.

ಮುದ್ದಜ್ಜ—ಮುಖ್ಯ ಒಂದೇ ವಿಚಾರ. ನಮ್ಮ ಅವ್ವನೋರಿಗೆ ಸಂತಾನ್ದ ಫಲ ಇದೆಯೋ ಇಲ್ಲವೋ ಅಂತ ನೋಡಿ ಹೇಳ್ಬದ್ರ್ಯಾತಷ್ಟೆ.

ಸರ್ವಮಂಗಳೆ—ಸುಮ್ಮನಿರೋ ಮುದ್ದಜ್ಜಾ! ಮಧ್ಯೆ ನೀನೊಬ್ಬ ಪ್ರಾರಂಭಿಸಿದೀ ಮತ್ತೆ.

ಮುದ್ದಜ್ಜ—ಅದಕ್ಯಾಕ ತಾಯೀ ಇಷ್ಟೊಂದು ನಾಚಿಕೆ! ವೈದ್ರ ಹತ್ರ ಹೋದೋರು ರೋಗವನ್ನ ಮರ್ಸಿದ್ರೆ ಬರತ್ತೆಯೇ? ಮುಖ್ಯ ನಿಮ್ಗೆ ಸಂತಾನಾ ಒಂದು ಆಗಿದ್ರೆ ಈ ನನ್ನ ಕಿವಿಯಾದ್ರೂ ಸ್ವಲ್ಪ ಸರಿಯಾಗಿರ್ತಿದ್ದುವೋ ಏನೋ?

ಸಂಗಯ್ಯ—ಫಲಾ ಇಲ್ಲದೇ ಉಂಟೇ? ಏನು ನಿರಾಶೆ ಪಡಲಿಕ್ಕೆ ಇಷ್ಟ್ರಲ್ಲೇ ಪ್ರಾಯ ಕಳ್ದುಹೋಯ್ತೇನು? ಆಗಲೀ ನೋಡೋಣ ತಾಯೀ .... ನಿಮ್ಮ ಕೈಯನ್ನಾದ್ರೂ ನೋಡೋಣ ಇಂದು.

ಸರ್ವಮಂಗಳೆ—ಹಾಂ-ಹಾಗೇ ಮಾಡ್ರಿ. ನಾನೂ ಅದನ್ನೇ ಹೇಳ್ಬೇಕಂತಿದ್ದೆ. (ಕೈಕೊಡುವಳು)

ಮುದ್ದಜ್ಜ—(ಸ್ವ) ಇದು ಮಾತ್ರ ನನ್ಗೆ ಸರಿಕಾಣೋಲ್ಲ-ನಮ್ಮವ್ವಂದು. ನಾನು ಇವರೀಗೆ ಎಷ್ಟೋ ಸಾರಿ ಹೇಳ್ದೆ-ಹೀಗೆಲ್ಲರಿಗೂ ಕೈಕೊಡ್ಬಾರ್ದು ಅಂತ, ಕೇಳೋಕಿಲ್ಲ ಇವರು. ಈಗಿನ ಕಾಲ್ದಲ್ಲಿ ಈ ಎಲ್ಲಾ ಜೋಯ್ಸರನ್ನ, ವೈದ್ಯರನ್ನ ನಂಬೋದ್ನಷ್ಟ. ಇವರೂ ಅವ್ವಾ-ತಾಯೀ-ಅಂತ ಹೇಳ್ತಲೇ ತಾಯನ್ನ....ಠಂಗಕ್ಕೆ ಎಳೀತಾರೆ. ಆದ್ರೆ ಈ ನಮ್ಮವ್ವೋರಿಗೆ ಈ ಸಂತಾನದ ಹುಚ್ಚೊಂದು ಹಿಡ್ದು ಬಂದೋರಿಗೆಲ್ಲಾ ಕೈಕೊಡೋದೇ ಆಗಿಬಿಟ್ಟದೆ.

ಸಂಗಯ್ಯ—(ಕೈಹಿಡಿದು ಪರೀಕ್ಷಿಸುತ್ತ) (ಸ್ವ) ಏನು ಭಾಗ್ಯದ ಕೈ ಇದು! ಇದನ್ನ ಹಿಡಿದ ನನ್ನ ಭಾಗ್ಯವೂ ಭಾಗ್ಯವೇ!

ಮುದ್ದಜ್ಜ—ಏನು ಸ್ವಾಮಿಯೋರಾ! ಕೈಹಿಡ್ದು ಕುಂತ್ಕೇಬಿಟ್ರಿಲ್ಲ - ಬಾಯಿ ಬಿಡ್ಬಾರ್ದೇನು? ಅನ್ರಲ್ಲಾ ಏನಿದೇ ಅಂತ ಹಾಂಗೊಮ್ಮೆ!

ಸಂಗಯ್ಯ—ತಾಯೀ! ಇದು ಬಹು ಸುಲಕ್ಷಣವಾದ ಕೈ. ಮಹಾಭಾಗ್ಯವಂತರಲ್ಲಿರತಕ್ಕ ಎಲ್ಲಾ ಲಕ್ಷಣಗಳೂ ಇದರಲ್ಲಿವೆ. ಇಗೋಳ್ಳಿ, ಇದು ಅದೃಷ್ಟರೇಖೆ; ಹ್ಯಾಗೆ ಎಲ್ಲೂ ನಿಲ್ಲದೇ ಮುಂದಕ್ಕೆ ಸಾಗಿದೆ ನೋಡಿ! ಇಗೋಳ್ಳಿ, ಇದು ಆಯುಷ್ಯರೇಖೆ; ಪೂರ್ಣ ಆಯುಸ್ಸು ತೋರಿಸ್ತಾ ಇದೆ. ಅಲ್ಪಾಯುಷಿಗಳಾಗಿದ್ರೆ ಈ ರೇಖೆ ಇಲ್ಲಿಗೇ ನಿಲ್ಲಬೇಕಾಗಿತ್ತು. ಈ ಕಡೆ ಇರುವಂಥಾದ್ದು ಶಿರೋರೇಖೆ, ಎಷ್ಟು ದಷ್ಟಪುಷ್ಟವಾಗಿದೆ ನೋಡಿ! ಆದ್ರಿಂದ ಈ ಚಿಹ್ನೆ ಹೃದಯದ ಶಾಂತಿ ಉದಾರತೆಯನ್ನ ತೋರಿಸ್ತದೆ. ಈ ಮೇಲಿನದು ಹೃದಯರೇಖೆ ....

ಮುದ್ದಜ್ಜ—ಸ್ವಾಮೀ! ಹಾಗಾದರೆ ಅಲ್ಲಿ ಸಂತಾನರೇಖೆ ಇಲ್ಲವೇನು?

ಸಂಗಯ್ಯ—ಉಂಟಯ್ಯಾ, ಅದು ಈ ಕಡೆ, ವಿವಾಹರೇಖೆಯ ಕೆಳಗೆ ಇದೆ.

ಮುದ್ದಜ್ಜ—ಮುಖ್ಯ ಅದೊಂದು ಏನನ್ನತ್ತೇ ಅಂತ ಬಿಡ್ಸಿ ಹೇಳ್ಬಿಡಿ ಸ್ವಾಮಿ.... ಮತ್ತೆ ಇದೆಲ್ಲಾ ಯಾಕೆ? ಇದು ಎಲ್ಲರಿಗೂ ಗೊತ್ತದೆ ಕಾಣ್ರಿ.

ಸಂಗಯ್ಯ—ಸಂತಾನ ಆಗಲೇಬೇಕೂ-ಇಂದಲ್ಲ ನಾಳೆಯಾದ್ರೂ! ಮಕ್ಕಳ ನ್ನೆತ್ತಿ ಆಡ್ಸದೇ ಇರತಕ್ಕ ಕೈಯೇ ಅಲ್ಲ ಇದು. ತಾಯಿ! ತಾವು ಏನೂ ಯೋಚಿಸಬೇಡ್ರಿ, ತಮ್ಮ ಇಪ್ಪತ್ತನಾಲ್ಕನೇ ಆಯುಸ್ಸಿನ ಒಳಗೇ ಸಂತಾನ ಆಗಿಯೇ ಆಗುತ್ತೆ.

ಮುದ್ದಜ್ಜ—ಹಾಂಗಾದ್ರೆ ಇದು ಸುಳ್ಳು. ಈಗಲೇ ಅಮ್ಮಾವ್ರಿಗೆ ನಡೀತಾ ಇರೋದು ಇಪ್ಪತ್ತೈದನೇ ವರ್ಷ ಅಂದಮ್ಯಾಗೇ ನಿಮ್ಮ ಮಾತನ್ನ ಹ್ಯಾಂಗ್ ನಂಬಬೇಕು ಸ್ವಾಮೀ ನಾವು?

ಸಂಗಯ್ಯ—ಹಾಗಲ್ಲ ಮುದ್ದಜ್ಜಾ, ಇಪ್ಪತ್ನಾಲ್ಕಂದ್ರೆ ಇಪ್ಪತ್ನಾಲ್ಕೇ ಅಂತಲ್ಲಾ, ಸ್ವಲ್ಪ ಹೆಚ್ಚುಕಡಿಮೆ-ಅಂತೂ ಮಕ್ಕಳಾಗಿಯೇ ಆಗುತ್ತೆ.

ಮುದ್ದಜ್ಜ—ಹತ್ತಾಚೆ ಹತ್ತೀಚೆ - ಅಂತೂ ತೆಕ್ಕೆ ಹೆಚ್ಚೂ ಕಡಿಮೆ - ಸಂತಾನ ಆಗುತ್ತೆ ಅಂತ ಅನ್ನಿ.

ಸರ್ವಮಂಗಳೆ—ಇನ್ನು ಏಳಲೇನು ಹಾಗಾದ್ರೆ?

ಸಂಗಯ್ಯ—(ಸ್ವ) ಹ್ಯಾಗೀ ಕೈ ಬಿಡಲಪ್ಪಾ ಇಷ್ಟು ಬೇಗ? (ಪ್ರ) ಆಗಲೀ ತಾಯೀ....ಏಳ್ರಿ. (ಸರ್ವಮಂಗಳೆಯು ಒಳಕ್ಕೆ ಹೋಗುವಳು)

ಮುದ್ದಜ್ಜ—ಸ್ವಾಮಿಗಳಾ! ನನ್ನ ಕೈಯ್ನೊಂದು ನೋಡ್ತೀರಾ ಸ್ವಲ್ಪ - ಈ ಮನೇ ಅನ್ನದ ಋಣ ಇನ್ನೆಷ್ಟು ದಿನಾ ಇದೇ ಅಂತ ಸ್ವಲ್ಪ ಕಂಡ ಹೇಳ್ರಿ ನೋಡ್ವ.

ಸಂಗಯ್ಯ—ನನ್ನ-ನಿನ್ನದೇನಪ್ಪಾ ನೋಡೋದು? ಇನ್ನೂ ನಮಗೆ ಏನಾಗ ಬೇಕಾಗಿದೆ ಹೇಳು ಲೋಕದಲ್ಲಿ ಇದ್ದು?

ಮುದ್ದಜ್ಜ—ಓಹೋಹೋ! ಆಗಲೇ ವಿರಕ್ತಿ ಬಂದುಬಿಡ್ತೇನು ಸ್ವಾಮಿ ಯೋರಿಗೆ? ಅಂದ್ರ .... ಇದು ಈ ಮುದುಕನ ಕೈ ನೋಡಲಿಕ್ಕಾಗಿ ಮಾತ್ರ ಅಂತ ಕಾಣತ್ತೆ ಅಲ್ವೇ? - ಆಗಲೀ ಸ್ವಾಮಿ.

(ಸರ್ವಮಂಗಳೆಯು ಕಾಣಿಕೆ, ಅಕ್ಕಿ, ಕಾಯನ್ನು ತಂದಿಟ್ಟು ನಮಸ್ಕರಿಸುವಳು)

ಸಂಗಯ್ಯ—ಹ್ಯಾಗೂ ಉಂಟಲ್ಲಾ ಇನ್ನೂ ನೋಡೋದು – ಜಾತಕ–ಗೀತಕಾ ಅಂತ, ಆಗ ಕೊಟ್ಟದ್ರೂ ಸಾಕಿತ್ತು ಹೂ–ಆಗಲೀ ತಮ್ಮ ಸಂತೋಷ. ನಾಳೆ ಜಾತಕವೊಂದಿಷ್ಟು ಮಾತ್ರ ಕಳ್ಸಿಕೊಟ್ಟುಬಿಡ್ರೀ–ಬರ್ತೇನೆ ನಾನು. ಮುದ್ದಜ್ಜಾ, ಬರ್ತೇನಪ್ಪಾ. (ಹೋಗುವರು)

ಮುದ್ದಜ್ಜ—ಓಹೋ! ಸ್ವಾಮಿಗಳು ಹೊರಟೇಬಿಟ್ರೇನು ಹಾಗಾದ್ರೆ .... ಶರಣಾರ್ಥಿ ಬುದ್ದೀ! (ಅವರು ಹೋದನಂತರ) (ಸ್ವ) ಹೆಂಗಸರಿಗೇ ಒಂದು ತರಾ, ಗಂಡಸರಿಗೇ ಒಂದು ತರಾ ಈ ಸ್ವಾಮಿಗಳ ಆಶೀರ್ವಾದ.

ಸರ್ವಮಂಗಳೆ—ಮುದ್ದಜ್ಜಾ! ಅಯ್ಯನೋರು ಚೆನ್ನಾಗಿ ತಿಳಿದಂತೆ ತೋರುವುದಲ್ಲೇನು?

ಮುದ್ದಜ್ಜ—(ಕೊಂಕು ಸ್ವರ) ನಂಗೇನ್ ಗೊತ್ರವ್ವಾ!

ಸರ್ವಮಂಗಳೆ—ಅವರ ಅಮೃತವಾಣಿಯಲ್ಲಿ ನುಡಿದಂತೆ ಒಂದು ಕುಲೋದ್ಧಾರಕ ರತ್ನ ನನ್ನುದರದಲ್ಲಿ ಜನಿಸಿದ್ದರೆ ಸಾಕಿತ್ತು.

ಮುದ್ದಜ್ಜ—ಮತ್ತೆ ನನ್ನದೇನು ವಿಷವಾಣಿಯೇನವ್ವಾ? ತಾಯೀ, ಈ ಹೊಸ ವೈದ್ಯರಿಗಿಂತಲೂ ಹಳೇ ರೋಗಿಗಳ ಅನುಭವವೇ ಹೆಚ್ಚು ಕಾಣ್ರವ್ವಾ. ನಿನ್ನೆ ಮೊನ್ನಿನ ಈ ಸುಧಾರಿಸೀದ ಅಯ್ಯನೋರಿಗಿಂತ್ಲೂ ಈ ಹಳೇ ಮುದುಕನ ಮಾತು ಮೇಲವ್ವಾ. ಕೇಳೀ–ನಾನು ಹೇಳ್ತೇನೆ–ನಿಮಗೆ ಸಂತಾನ ಆಗಿಯೇ ಆಗತ್ತೆ–ಅವನ್ನ ನಾನು ಎತ್ತಿ ಆಡ್ಸಿಯೇ ಸಾಯ್ತೇನೆ.

ಸರ್ವಮಂಗಳೆ—ಮುದ್ದಜ್ಜಾ! ನೀನು ಹೇಳುವುದು ಅವರಿವರು ಹೇಳಿದ್ದನ್ನ ಕೇಳಿ.... ಸತ್ಯ ಹೇಳು... ನೀನೇನಾದರೂ ಶಾಸ್ತ್ರ ತಿಳಿದಿರುವೆಯೇನು? ತಿಳಿದಿದ್ದರೆ ಅದೂ ಆಗಲಿ–ಹೇಳು ನೋಡುವ.

ಮುದ್ದಜ್ಜ—ಶಾಸ್ತ್ರ! ಅದೆಂತದವ್ವಾ ಶಾಸ್ತ್ರ ಮತ್ತೆ ನಾನು ತಿಳೀದೇ ಇರ್ತೀನೇನು? ಕೇಳೀ ಹೇಳ್ತೇನೆ. ನಿಮ್ಮ ಕೈ ಕೊಡ್ರೀ ಇಲ್ಲೀ.

(ಕೊಡುವಳು) ನೋಡೀ....ಆಂ....ನಿಮಗೆ ಶ್ರೀಮಂತರ ಕೂಡಾ ಲಗ್ನಾ ಆಗಿದೆ....ಚಹಳ ದಿವ್ಸಗಳವರಿಗೂ ಮಕ್ಕಳಾಗದೇ ಅಳ್ತಾ ಅಳ್ತಾ .... ಬೇಸರ ಬಂದಾಗಲೆಲ್ಲಾ ಒಬ್ಬ ಅಜ್ಜನ ಕಿವೀ ಹಿಡಿದು ಜೋತು ಬೀಳ್ತಾ ಇರ್ತ್ತೀರಿ....(ಸರ್ವಮಂಗಳೆಯು ನಗುತ್ತ ಮುಂದೆ ಮುಂದೆ ಎಂದು ಹೇಳುತ್ತ ಲಿರುವಳು.) ಮುಂದೇ....ಈಗ ನಿಮಗೇ ವಯಸ್ಸೂ ಇಪ್ಪತ್ತೈದು ... ಮತ್ತೆ ಸಧ್ಯವೇ ಮಕ್ಕಳಾಗುತ್ತವೆ, ಹೆದರಬೇಕಾದ್ದಿಲ್ಲಾ ...ಇನ್ನೂ....

ಸರ್ವಮಂಗಳೆ—ಅಯ್ಯೋ-ಇನ್ನೂ ಉಂಟೋ ?

ಮುದ್ದಜ್ಜ—ಬೇಕಾದ್ರೆ ಇನ್ನೂ ಉಂಟು ಕೇಳೀ....ನಿಮ್ಮ ಯಜಮಾನ್ರು ಉತ್ತಮ ಘರಾಣೆಯಲ್ಲಿ ಹುಟ್ಟೆಯೂ ಒಂದು ಒಕ್ಕಲಿಗರ ಮನೆಯ ಹೆಣ್ಣ ನೋಡಿ ಮದ್ವೇ ಮಾಡ್ಕೋಬೇಕಂತ ಪ್ರಯತ್ನಪಡ್ತಾರೆ.

ಸರ್ವಮಂಗಳೆ—ಆಂ....ಮುದ್ದಜ್ಜಾ....ಅದೇನೋ ಮತ್ತೇ ?

ಮುದ್ದಜ್ಜ—ಕೇಳೀ ಹೇಳ್ತೀನ್ರವ್ವಾ....ಆದ್ರೆ ಕನ್ಯೆ ಕಡೆಯೋರು ಒಪ್ಪೋದಿಲ್ಲ. ಸಾಹುಕಾರ್ರ ಮನೆಯಲ್ಲೂ ಅಸಮಾಧಾನ ಆಗತ್ತೆ. ಮುದ್ಕನ ಮಾತೀಗೆ ಬೆಲೆ ಬರೋದಿಲ್ಲ.. ಊಂ....ಯಜಮಾನ್ರು ಸಿಟ್ಟಾಗಿ .... ಮುದುಕನ ಕಪಾಲಪೂಜೇ ಮಾಡ್ತಾರೆ....(ಅಳುತ್ತ) ಮುಂದೆ ಕನ್ಯೇ ಕಡೆಯವರಿಗೆ ತೊಂದ್ರೆ ಕೊಡ್ತಾರೆ.............ಕಣ್ಣೀರು ಹಾಕಸ್ತಾರೆ............ಮನೇಗೆ ಅನಿಷ್ಟಾ ತಂದುಕೋತಾರೇ .... ... ಮುದ್ಕ ಎದೇ ಒಡ್ಡೇ ಸಾಯ್ತಾನೆ. (ಗೋಳಿಟ್ಟು ಅಳುವನು)

ಸರ್ವಮಂಗಳೆ—ಏನು ಅಜ್ಜಾ ಇದೂ ! ಏನ ಹೇಳ್ತಾ ಇದ್ದೀ ನೀನು ? ದಯವಿಟ್ಟು ಬಿಡ್ಸೀ ಹೇಳು.

ಮುದ್ದಜ್ಜ—(ಕಣ್ಣೀರು ಉಜ್ಜಿಕೊಳ್ಳುತ್ತ) ಇನ್ನೇನು ಹೇಳ್ಳವ್ವಾ?....ಹೇಳಿದ್ನಲ್ಲಾ ಎಲ್ಲವನ್ನೂ-ಇನ್ನೂ ಸಾಲ್ದೇ ? ತಾಯೀ, ನನ್ನೆದೆ ಬತ್ತಿಹೋಗಿದೆ ಈಗ; ನಾನು ಮಾತಾಡಲಾರೆ....ನನ್ನನ್ನು ದಯವಿಟ್ಟು ನನ್ನ ಪಾಡಿಗೆ ಬಿಟ್ಟು ಬಿಡ್ರಿ. (ಹೋಗುವನು)

ಸರ್ವಮಂಗಳೆ—ಅಜ್ಜಾ - ಮುದ್ದಜ್ಜಾ ! ಓ ಮುದ್ದಜ್ಜಾ !........ಆಂ.... ಹೊರಟೇಹೋಗಿಬಿಟ್ಟನಲ್ಲಾ ಇವನು. ಇವನೀಗ ಅಂದುದೇನು ? ಯಾವುದೋ ಒಂದು ಮುಂದಿನ ದುರ್ನಿಮಿತ್ತ ........ ನಡೆಯುತ್ತಿರುವ ಯಜಮಾನರ ಯಾವುದೋ ಪ್ರಣಯಲೀಲೆ ದೇವಾ ! ಇದೆಂತಹ ಕುತ್ತನ್ನೊಂದು ತಂದಿರಿಸಿದೆ ಇದಿರಲ್ಲಿ ? ಸರ್ವಸ್ವವೂ ನೀನೇ ಎಂದು ನಂಬಿರುವಾಗಲೂ ನಿನ್ನೀ ಆಘಾತವೇ ? ಬೇಡ ಪ್ರಭೋ ! ದಾಸಿ ಯನ್ನು ನೀನೇ ಉದ್ಧರಿಸಿ ಕಾಪಾಡು.

ರಾಗ_ಆಸಾ ತಾಳ_ಏಕ್ಕಾ

ಆದಿ ಅಂತ್ಯರಹಿತ ದೇವ | ಸುಂದರ ಸುಖರೂಪಾ || ಧೃ ||

ಹೃದಯ ದಯಾಪೂರ್ಣಭರಿತ | ವೇದಾಗಮ ಶಾಸ್ತ್ರಾತೀತ |
ಸದಯಶಾಂತ ಸುಜನಪ್ರೀತ | ನಾ ಧ್ಯಾಸಿಪೆ ಕಾಯೋ || ೧ ||

[ತೆರೆ ಬೀಳುವುದು]

## ನೋಟ ೮

[ ಶಿವಗ್ರಾಮದ ಹೊಲದಲ್ಲಿಯ ಒಂದು ಭಾಗ. ತೆರೆಯಲ್ಲಿಯೇ ಸಿದ್ದಪ್ಪನು ಕೂಗುತ್ತಲಿರುವನು.]

ಸಿದ್ದಪ್ಪ—ಏ....ಅಗಾ ಅಗಾ ! ಯಾರದ್ದೋ ಅದು ಎಮ್ಮೀ ? ಇನ್ನ ಹಿಂಡೀ ಗಷ್ಟು ಬಿಸಿನೀರು ಚೆಲ್ಲಾ ! ಆಂ-ಆಂ-ಆಂ....ಹೊಲದೊಳಗೇ ನುಗ್ಗ ತಲ್ಲಪ್ಪಾ ಅದೂ....ಥೂ....ಅದ್ರ ಮನೇ ಹಾಳಾಗ. ಹೊಲಾ ಎಲ್ಲಾ ತಿಂದು ಧೂಳೆಬ್ಬಿಸಿಬಿಟ್ಟಿತೂ .... ಯೇ .... ಯೇ ತಮ್ಮಾ ! ಅದನ್ನ ಈಚೇಗೆ ಓಡ್ಸು, ಓಡ್ಸದನ್ನ....ಅವರ ಮುಸಡೀಗಷ್ಟು ಬೆಂಕೀ ಹತ್ತಾ ! ಮತ್ತೆ ಈ ಕಡೆ ನುಗ್ಗತ್ತಲ್ಲಪ್ಪಾ ಅದೂ....ಹಾಂ-ಹಾಂ-ಹಾಂ-ಹಾಂಗೇ ಅಟ್ಟು ಆಚೇಗದನ್ನ....ಹೌದು ಹೌದು, ತಿಮ್ಮಾ....ಹಾಕದ್ರ ಸೊಂಟದ

ವ್ಯಾಗೆ; ಮೂಳೇ ಮುರ್ದ್ಹೋಗ್ಲಿ. ಹೋಕಲಗೇಡಿಗಳೀಗೆ ಕರಗಳನ್ನು ಸಾಕಲಿಕ್ಕೆ ಆಗದೇ ಇದ್ರೆ ಕಟ್ಟಬೇಕ್ಯಾಕದನ್ನ! ಥೂ....ಅವ್ರ ಮನೇಗಷ್ಟು ಕಿಚ್ಚು ಹಾಕಾ–ತಿಮ್ಮಾ! ಯಾರದ್ದೋ ಆ ಎಮ್ಮೇ ಅದೂ? (ಪ್ರವೇಶಿಸಿ) ನೋಡು, ಎಲ್ಲಾ ತಿಂದು ಲೂಟಿ ಮಾಡಿಬಿಟ್ಟೆತು; ರಂಡೇಗಂಡ್ರೀಗೆ ಸಾಕಲಿಕ್ಯಾಗ್ದೆ ಇದ್ರೆ ಕ್ಯೊದು ತಿನ್ನೋರೀಕ್ಕೊಡಬೇಕು. ಈ ಅನಿಷ್ಟಾ ಚಂಡಾಲ್ರು ಮನೇ ಮಾಡ್ಕೊಂಡಿದ್ದವರಾದ್ರೆ ಗೊತ್ತಾಗ್ತಿತ್ತು ನಮ್ಮ ಕಷ್ಟ!

ತಿಮ್ಮ—(ಪ್ರವೇಶಿಸಿ) ಹೋಯ್ತು....ಹೋಯ್ತುಯ್ಯಾ! ಅದನ್ನ ಅಟ್ಟೆ ಆಚೇಗೆ, ಬೈಬ್ಯಾಡ್ರಿ. ಅದೂ ನಮ್ಮ ಗೌಡ್ರ ಮನೇ ಬರಡೂ.

ಸಿದ್ದಪ್ಪ—ಯಾವ ಅನಾಚಾಳೀ ಮುಂಡೇಮಗಂದಾದ್ರೇನು? ಇದೊಳ್ಳೇ ಕೆಲ್ಸ! ವ್ಹಾ! ಗೌಡನೇ ಕುಂತು ಹೀಂಗೆ ಮಾಡಲಿಕ್ಕೆ ಹತ್ತಾದ ಅಂದ್ರೆ ನಾವು ಚೆನ್ನಾಗಿ ಪೈರು ಬೆಳೀಬಹ್ದು! ಒಂದಿನಾ ಅಂದ್ರೆ ಚಿಂತೆ ಇಲ್ಲಾ, ನಿತ್ಯಾನೂ ಇದೇ ಹಣೇಬರ್ಹೇ! ಯಾವಾಗ ಕೇಳ್ದ್ರೂ ಗೌಡ್ರದ್ದು-ಸವ್ಕಾರ್ರದ್ದೂ....ಇವ್ರ ದೆಸಿಂದಾ ನಾವೇನು ಸಾಯ್ಬೇಕಾ ಇರ್ಬೇಕಾ?

ತಿಮ್ಮ—ಏನ್ಮಾಡೋದೊಡ್ಯಾ? ಬೆಳ್ದೋರಿಗ್ಹೊಟ್ಟೆ ಉರಿಯುತ್ತೆ.... ಅವ್ರ ಗೋಳು ಅವರಿಗೇನು ಗೊತ್ತಾಗ್ಬೇಕು?

ಸಿದ್ದಪ್ಪ—ನಮ್ಮಂತೇ ಆ ಗೌಡ್ನೂ ಹೊಲಾ ಬೆಳ್ದಿಲ್ಲೇನು ಮತ್ತೆ? ನನ್ನ ಹೋರಿಗ್ಳನ್ನಾ ಅವ್ನ ಹೊಲಕ್ಕೆ ಅಟ್ಟಿದ್ರೆ ಕೇಳ್ತಾನೇನು? ಕೈ ನಿಗ್ರಕೊಂಡೇ ಬರ್ತಾನೆ. ಯಾವ ದೇವ್ರ ದಯದಿಂದ್ಲೋ ಈ ವರ್ಷವಷ್ಟು ಬೆಳೇ ಚೆನ್ನಾಗಿತ್ತು. ಅದು ಕೈಗೆ ಬರುವಷ್ಟಕ್ಕೆ ನಾವೇನಿವನ್ನೆಲ್ಲಾ ಈ ಗೌಡಾ ಶ್ರೀಮಂತ್ನ ಗಂಟೇಗ್ತಿನ್ನಿ ಕೂತ್ರೆ ಮತ್ತೆ ನಮ್ಗೇನ್ಸಿಗತ್ತೆ?

ತಿಮ್ಮ—ಹೌದೊಡ್ಯಾ. ನೀವನ್ನೋದು ನಿಜ್ವೇ. ಮಾರಾಯ್ರು ಅವ್ರೇ ತಿಳೀಬೇಕು. ಅಂತವ್ರೀಗೆಲ್ಲಾ ನಾವು ಹೇಳ್ಬೇಕೇನು?

ಸಿದ್ದಪ್ಪ—ಈ ವಕ್ಕಲೀಗ್ರ ಹಣೇಬರ್ಹೇ ಇದು. ದುಡಿಯೋದೆಲ್ಲಾ ದಂಡಕ್ಕೆ, ಗೌಡಂದೂ, ಸಾವ್ಕಾರಂದೂ, ಶ್ಯಾನುಭಾಗರದ್ದೂ ಅಂತ ಇವ್ರ ಗಂಟೇನೆಲ್ಲಾ ತಿಂದುಳವದ್ದೂ ನಮ್ಮ ಕೈಗೆ. ಆಮೇಲಾದ್ರೂ ಸುಖಾ ಇದ್ಯೆ?

ಆ ಸರ್ಕಾರದೋರ ಕಂದಾಯ, ಗೌಡ–ಶ್ಯಾನುಭಾಗ್ರ ಖುಶೀ, ಸಾವ ಕಾರ್ನ ಗಂಟು ತುಂಬ್ಸುವಷ್ಟಕ್ಕೆ ಇಲ್ಲಿ ಉಳಿಯೋದು ಸೊನ್ನೇ! ಮತ್ತೆ ನಮ್ಗೆ ತಕ್ಕೊಂಡ ಹೊಟ್ಟೆ ಸರಿ–ಮುರಕ ನೇಗ್ಲು, ಬಡ್ಕಲ ಎತ್ತು ಇಷ್ಟೆ! ಹಿಂದೀನ್ಜನ್ಮದಾಗ ಪಾಪ ಮಾಡಿದೋರು ಈ ಜನ್ಮದಾಗ ರೈತರಾಗಿ ಹುಟ್ಟತಾರೇನೋ.... ಪಾಪ !

ತಿಮ್ಮ—ಆದ್ರೂ ಇಡೀ ಜಗತ್ತಿನ ಹೊಟ್ಟೇಗ್ಕೊಡೋ ಪುಣ್ಯ ರೈತ್ರದ್ದಲ್ಲೇನಣ್ಣಾ?

ಸಿದ್ದಪ್ಪ—ಹಾಂ! ಈ ಒಣ ಮಾತಿನಂತ್ಲೇ ಕುಣ್ದೂ ಕುಣ್ದೂ ನಾವೂ ಸಣ್ಣಾಗಿಹೋದ್ದು! ರೈತ ಉಣ್ಣೋ ಕುಣ್ದ–ಸೊರಗ್ದ; ಜೇರ್ಯೋರು ತಿನ್ನಲಾರ್ದೆ ತಿಂದು ಬೀಗಿದ್ರು, ಇಷ್ಟೇ ಅಲ್ಲೇನು ಲೋಕ್ದಲ್ಲಿ ?

ತಿಮ್ಮ—ನಿಮ್ಮಾತೆಲ್ಲ ಸಿಜ್ವೆ. ಹಾಗಂತ ಕೂತಿದ್ರಾಗತ್ತೇ ನನ್ನೊಡ್ಯಾ ?

ಸಿದ್ದಪ್ಪ—(ತಿರುಗಿ ಹೊಲದ ಕಡೆ ನೋಡಿ) ಅಂ! ಅಗಾ....ಮತ್ನೋಡಿದ್ಯಾ ? ಇನ್ನೊಂದ್ಯಾವ್ದೋ ಬಂತು ಆಕಳು ಹೊಲಕ್ಕೇ. ಆಂ....ಹಾ! ಇನ್ನ ಸಾವ್ಕಾರ್ರು ಗೌಡ್ರು ಅಂದ್ರೆ ಆಗೋದಲ್ಲಾ ಇದು, ಇವನ್ನೆಲ್ಲಾ ತಕ್ಕೊಂಡ್ಹೋಗಿ ದೊಡ್ಡೀಲ್ಕೂಡ್ತೇನೆ. (ಓಡುತ್ತಾ) ಏ....ಯಾರೋ ಅಲ್ಲೀ ? ಹೊಡೀ – ಹೊಡೀ ಆ ಆಕ್ಳನ್ನ ಸಂಕಣ್ಣಾ, ಕಟ್ಟದನ್ನ....ಅದ್ರ ಮನೇ ಹಾಳಾಗ .... ....

ತಿಮ್ಮ—(ಜಿಗುಪ್ಸೆಯಿಂದ ನಕ್ಕು) ಯಾರದ್ದೂ ಅಲ್ಲ....ಇದು ಸಾವ್ಕಾರ್ರ ಮನೇ ಆಕ್ಳು. ಬರೇ ಕೂಗ್ಕೊಳ್ಳೋದೇ ಇವರು. ತಕ್ಕೊಂಡ್ಹೋಗಿ ಒಮ್ಮೆ ದೊಡ್ಡೀ ಕೂಡಿದ್ರೂ ಅವರೇನು ಕಾಸ್ಕೊಟ್ಟು ಬಿಡ್ಸೋದಪ್ಪಲ್ಲೇ ಇದೆ; ಸುಮ್ನೇ ಅವರದ್ದೊಂದು ಕಣ್ಣು ಇವರಮ್ಯಾಗಪ್ಟೆ ! ಈ ಸಾವ್ಕಾರ್ರು, ಗೌಡ್ರ ಮನೇ ದನಾ ಕಾಯೋ ಮಾದಿಗರೀಗೂ ಅದೆಷ್ಟು ಧಿಮಾಕು ! ಒಡ್ಯೇರಗಿಂತಾ ಹೆಚ್ಚಿರತ್ತೆ ಇವರೀಗೆ. ಸುಮ್ಕೆ ಎಲ್ರಿಂದ್ಲೂ ಸಿಪ್ಗೂರ ಧಣಿಯೋರೀಗೆ, ಈ ಹೋಕ್ಲಗೇಡಿಗಳಿಂದಾ. ಹೂಂ–ನಡೀಲಿ.... ಇವ ರೆಲ್ಲಾ ಆಟಾ, ನಾನೂ ನೋಡ್ತಲೇ ಇರ್ತೀನಿ. (ಹೋಗುವನು)

[ ತೆರೆ ಬೀಳುವುದು ]



# ಅಂಕ ೨

## ನೋಟ ೧

[ ಸಂಕಪ್ಪನ ಮನೆ. ಗಂಗವ್ವನು ಬಹು ಯೋಚನೆಯಲ್ಲಿ ಕಪಾಲಕ್ಕೆ ಕೈಕೊಟ್ಟು ಅಡ್ಡಾಗಿರುವಳು. ]

ಗಂಗವ್ವ—ಸಾಹುಕಾರ್ರ ಸಾಲ ನೂರೈವತ್ತು ರೂಪ್ಯಾ ! ಇದನ್ನ ಈ ವರ್ಷವೇ ತೀರ್ಸಲಿಕ್ಕೆ ಸಾಧ್ಯವೇನು ನಮ್ಮಿಂದ ? ಅಪ್ಪ ಮತ್ತೆಲ್ಲಾದ್ರೂ ಇಂದು ಸಾಲಾ ಕೇಳ್ತಾನೋ ಏನೋ ಸಾವ್ಕಾರ್ರಲ್ಲಿ ! ಇದೇನಪ್ಪಾ ಕಷ್ಟಾ ಈ ಮುದೀತನ್ದಲ್ಲಿ ನಮ್ಮಪ್ಪ ತಲೀಮ್ಯಾಲೇ ? ಈ ಸಾಲ್ದ ಹೊರೆ ಯಿಂದ – ಸಾವ್ಕಾರ್ರ ಋಣದಿಂದ ನಾವು ಬಿಡ್ಗಡೆ ಹೊಂದಲಿಕ್ಕೆ ಸಾಧ್ಯ ವೇನು ? ಈ ಮನೇ–ಹೊಲಾ, ಕಾಳು ಕಡ್ಡಿ ಉಳ್ಸ್ತಾರೇನು ಸಾವ್ಕಾರ್ರು ? ಹ್ಯಾಗಪ್ಪಾ ಇದ್ರಿಂದ ಪಾರಾಗೋದು ?

ಚನ್ನ—(ಪ್ರವೇಶಿಸಿ) ಏನೇ ಗಂಗೀ.... ಹೀಗ್ಯಾಕ್ ಧ್ಯಾನಸ್ತಾ ಕೂತಿದ್ದಿಯೇ.... ನಿನ್ಗೇನು ಬಂತಪ್ಪ ಯೋಚ್ನೆ ? (ಗಂಗವ್ವ ನಿರುತ್ತರ. ಹತ್ತಿರ ಬಂದು) ಯಾಕ್ ಗಂಗೀ ಮಾತಾಡೋದಿಲ್ಲಾ ? ನೀನೆಂದೂ ಒಂದು ಕ್ಷಣವೂ ಹೀಗೆ ಸುಮ್ಮನಿದ್ದವಳಲ್ಲವಲ್ಲೇ ? ಇದೇನಿದು ... ಇಂದೇ ಹೀಗ್ಯಾಕೆ ಮುಖ ಎಲ್ಲಾ ಬಾಡಿಹೋಗಿದೆಯಲ್ಲೇ ? (ತಾನೂ ಪಕ್ಕದಲ್ಲೇ ಅಡ್ಡಾಗುವನು.)

ಗಂಗವ್ವ—ನನ್ಗೆ ಇಂದೆಲ್ಲಾ ಅಪ್ನ ಸಾಲದ್ದೇ ಯೋಚ್ನೆ ಆಗಿದೆ ನೋಡು ಚನ್ನಾ. ಈ ಸಾಲ ತೀರ್ಸಲಿಕ್ಕೆ ನಮ್ಮಿಂದ ಆಗತ್ತೆಯೇ–ನೀನೇ ಹೇಳು.

ಚನ್ನ—ಹುಚ್ಚೀ ! ಇಷ್ಟೇ ಏನು ನಿನ್ನ ಧೈರ್ಯ ? ಈ ವರ್ಷದ ಪೈರು ಹ್ಯಾಂಗಿದೇ ಅಂತ ನೋಡಿಲ್ಲೇನು ನೀನು ? ಆ ನೂರೈವತ್ತು ರೂಪ್ಯಾ ಎಲ್ಲೋ ಹಾರಿಹೋಗತ್ತೆ ! ನಾನನ್ನೋದಾದ್ರೆ ಕಾಳೀಗೆ ಸರಿಯಾದ

ಕ್ರಯ ಬಂದ್ರೇ ಮನೇ ಕೂಡಾ ಈ ವರ್ಷವೇ ಬಿಡ್ಸಿಕೊಳ್ಳಬಹುದು ಸಾವ್ಕಾರ್ರಿಂದ !

ಗಂಗವ್ವ—ಅದು ಸರಿಯೇ ಚನ್ನಾ. ಆದ್ರೆ ನನ್ಗೆ ಮತ್ತೊಂದು ಯೋಚ್ನೇ ಹತ್ತಿದೆ ಈಗ.

ಚನ್ನ—ಏನು ಮದ್ವೇಪೇನು ? ಆಗಿಯೇ ಆಗತ್ತೆ. ಈ ಸಾಲಾ ತೀರ್ಸಿದ ಮರು ದಿವ್ಸಾನೇ ನಮ್ಮಿಬ್ರ ಲಗ್ನವನ್ನ ಅಪ್ಪ ಮಾಡ್ಸಿಯೇ ಮಾಡ್ತಾನೆ....ನಿನ ಗ್ಯಾಕೆ ಚಿಂತೆ ? (ಎಂದು ಕೈಯನ್ನು ಗಂಗೆಯ ಬೆನ್ನಿನ ಮೇಲಕ್ಕಿರಿಸುವನು)

ಗಂಗವ್ವ—(ಕೊಂಚ ದೂರ ಸರಿದು) ನಿನ್ಗೆ ಯಾವಾಗ್ಲೂ ಒಂದೇ ಯೋಚ್ನೆ... ಮದ್ವೆ! ಮದ್ವೆ!! ಮದ್ವೆ !!! ಆದ್ರೆ ಅದು ಹ್ಯಾಗಾಗತ್ತೇಂತೇನಾದ್ರೂ ಯೋಚ್ನೆ ಉಂಟೇನು ನಿನಗೆ ? ಏನು ದುಡ್ಡು ದುಡ್ಡು ಕಟ್ಟಿಟ್ಟಿ ದ್ದೀಯೋ-ಹೆಂಡ್ತೀ ಮಕ್ಳಿಗೆ ಕೊಡಲಿಕ್ಕೆ-ನಾನಂತೂ ಕಾಣೆ. !

ಚನ್ನ—(ತಾನೂ ಹತ್ತಿರ ಸರಿದು) ಅಲ್ಲಾ, ಹಾಗಾದ್ರೆ ನೀನಾದ್ರೂ ಹೇಳ್ಬಾರ್ದೇ ಬಾಯ್ಬಿಟ್ಟು....ನಿನ್ನ ಯೋಚ್ನೇಗೆ ಕಾರ್ಣ ಏನೂ ಅಂತ ! ನಾನೇನಂತ ತಿಳಕೊಳ್ಳಿ ?

ಗಂಗವ್ವ—ಅಪ್ಪ ಆಗಲೇ ಅಂದ-ನಿಮ್ಮದ್ವೇ ಒಂದು ಜೇಗ ಮಾಡ್ಸಿಬಿಡ್ತೇನೇ, ಸಾವ್ಕಾರ್ರಲ್ಲಿಂದ ಸಾಲಾ ತಂದೂ ಅಂತ; ಈಗ ಅದಕ್ಕಾರಿಯಾಗಿ ಆತ ಅಲ್ಲೀಗೆ ಹೋಗಿದ್ದಾನೆ. ಮತ್ತೆಲ್ಲಾದ್ರೂ ಮದ್ವೆಗಂತ ಹೆಚ್ಚಿನ ಸಾಲಾ ಗೀಲಾ ಕೇಳ್ತಾನೋ ಅಂತ ನನಗೆ ಬಹು ಭಯ ಆಗಿಬಿಟ್ಟಿದೆ.

ಚನ್ನ—ಇಲ್ಲ ಕಾಣೆ. ಈಗ ಅಂವ ಅಲ್ಲಿ ಹೆಚ್ಚಿಗೆ ಸಾಲಾ ಕೇಳೋಕಿಲ್ಲ. ನಾವಾಗ್ಲೇ ಹೇಳಿದ್ದುವಲ್ಲಾ ಆತನೀಗೆ ಹಾಗ್ಮಾಡ್ಬೇಡಾ ಅಂತ. ಇದ್ರ ಮೇಲೂ ಮುದ್ಕ ತಂದೇ ಹಠ ಹಿಡ್ದು ಸಾಲಾ ತಂದು ಮದ್ವೇ ಮಾಡಿದ್ರೆ ಮಾಡವಲ್ಲನ್ಯಾಕೆ. ಕಷ್ಟಪಟ್ಟು ತೀರ್ಸಿದರಾಯ್ತು.

ಗಂಗವ್ವ—ತೀರ್ಸಬೇಕು ಸರೀ....ಆದ್ರೆ ಹ್ಯಾಂಗ್ ತೀರ್ಸಬೇಕೂ ಅಂತ ಬೇಕೇ ಬೇಡ್ವೇ ? ನಮ್ಮಲ್ಲೇನದೆ ಕೊಡಲಿಕ್ಕೆ .... ವಡ್ವೆ ಇದ್ಯೇ ?.... ವಸ್ತು ಇದ್ಯೇ .... ಏನದೆ ಹೇಳು ?

ಚನ್ನ—ವಡ್ವೆ ವಸ್ತು ಯಾಕ್ಬೇಕು ಗಂಗೀ ನಮ್ಗೆ ? ದೇಹದಲ್ಲಿ ಪ್ರಾಣಾ ಇದೆ, ರಟ್ಟೆಯಲ್ಲಿ ಶಕ್ತಿ ಇದೆ, ಮನಸ್ನಲ್ಲಿ ಧೈರ್ಯ ಇದೆ....ಸಾಲದೇನು ? .... ಇನ್ನು ನಿನಗೆ ಕೊಡಬೇಕಂದ್ರೆ ಮಾತ್ರ ಸ್ವಲ್ಪ ಯೋಚ್ನೇ ಅಷ್ಟೆ .... ಎಲ್ಲಿಂದ ತರ್ಲೀ ಅಂತ ? (ಕೊರಳಿ ಮೂರ ಬಂದು) ನಿನಗೆ ನನ್ನ ಬದ್ಲು ಇನ್ಯಾರಾದ್ರೂ ಪುಣ್ಯವಂತ ವರಾ ಸಿಕ್ಕಿದ್ರೆ ನಿನ್ನ ಜೀವ್ನಾದ್ರೂ ಸುಖ ವಾಗಿರ್‍ತಾ ಇತ್ತು.

ಗಂಗವ್ವ—(ಹತ್ತಿರಕ್ಕೆ ಹೊರಳಿ) ಇದೇನ್ಚನ್ನಾ ! ನನ್ನ ಪರೀಕ್ಷೆ ಮಾಡ್ತಿಯೇನು ನೀನು ? ನನಗೇನು ಕೊಡಬೇಕು ನೀನು ? ನಾನೇನಾದ್ರೂ ವಡ್ವೆ ವಸ್ತುಗಳಿಗೆ ಆಶೆಪಟ್ಟು ಕುಂತಿದ್ದೆ ಅಂತ ತಿಳ್ದಿಯೇನು ? ಏನೂ ಬೇಡ ನಂಗೆ. ನಿನ್ನ ಪ್ರೇಮ ಒಂದಿದ್ದರೆ ಸಾಕು. ಚನ್ನಾ ! ಇದ್ದ ದಿವ್ಸ ಸುಖ ವಾಗೂಟಾ ಮಾಡ್ಕೊಂಡಿರೋಣ, ಇಲ್ಲವಾದರೆ ಉಪಾಸಾನಾದ್ರೂ ಉಪಾಸಂತೆ....ಅದಕೇನು ?

ಚನ್ನ—ಹೌದು ಗಂಗೀ ! ವಡ್ವೇ ವಸ್ತು ಬೇಡ........ಆದ್ರೆ ಒಂದು ಚೂರು ರೊಟ್ಟೀನೋ, ಮುದ್ದೀನೋ ಆದ್ರೂ ನಾನ್ತಂದು ಹಾಕ್ಬೇಕೇ ಬೇಡ್ವೇ ಸುಖವಾಗ....ನನಗೆ ಜಮೀನಿದ್ಯೇ, ಮನೇ ಇದ್ಯೇ....ಏನದೆ ಹೇಳು ?

ಗಂಗವ್ವ—ಸಾಕು ಸುಮ್ಕನಿರು ಚನ್ನಾ ನೀನು....ಈಗಲೇ ಅಂದೆ-ದುಡೀತೇನೆ, ಸಾಲಾ ತೀರಸ್ತೇನೇ ಅಂತ. ಸಾಲಾ ತೀರ್ಸಲಿಕ್ಕಿದ್ದ ಬಲಾ ಒಪ್ಪತ್ತಿನ ಮುದ್ದೀಗೆ ಕೊಡಲಿಕ್ಕೆ ಇಲ್ಲೇನು ? ಇಗಾ ಚನ್ನಾ–ಸತ್ಯ ಹೇಳ್ತೇನೀ, ನನ್ನ ಬಗ್ಗೆ ನಿನ್ಗೆ ಯೋಚ್ನೆ ಬೇಡ. ಉಪಾಸಾದ್ರೆ ಉಪಾಸಾ, ವನ ವಾಸಾದ್ರೆ ವನವಾಸಾ ; ಏನು ...ನೀನೇನು ಹುಟ್ಟಿದ್ದು ತಿನ್ನಲಿಕ್ಕಂತ ತಿಳ್ದಿಯೇನು ನನ್ನನ್ನ ? ಇಂದೇ ಈ ದೇಹಾ ಬಿದ್ಹೋದ್ರೂ ಪ್ರೇಮಾ ಮಾತ್ರ ಹೋಗೋಕಿಲ್ಲ ...ಚೆನ್ನಾಗಿ ನೆನಪಿಟ್ಕೊಕೋ !

ಚನ್ನ—ಇಷ್ಟೊಂದಿದ್ರೆ ತೀರಿಯೇಹೋಯ್ತು. ನಮ್ಮ ಸಂಸಾರಾ ರಾಜಮಹಾ ರಾಜರ ಸಂಸಾರಕ್ಕಿಂತಲ್ಲೂ ಹೆಚ್ಚಂತ್ಲೇ ತಿಳೀತೇನೆ ನಾನು. ಗಂಗೀ ! ನಾನು ಆಶೆ ಪಡ್ತಾ ಇರೋದು ಅದನ್ನೇ. (ತನ್ನ ತಲೆಯನ್ನು ಗಂಗೆಯ ತಲೆಗೆ ಜೋಲಿಹೊಡಿಸಿ ಮೈಮರೆತು)

## ಡಾಯಲಾಗ್

ಗಂಗವ್ವ—ಶಾಂತೀ ಪ್ರೀತೀ ಜ್ಯೋತೀ ಪ್ರಕಾಶದಲೀ |
ಚನ್ನ—ಕಾಳಗತ್ತಲಾ ಓಡಿಸಿ ಭರದೇ–ಲೀಲೆಯಿಂದ ಲೋಲಾಡುವ ಮುದದೇ ||
ಗಂಗವ್ವ—ಬಾಳನೌಕೆಯಾ ಪ್ರೇಮಶರಧಿಲೀ – ತೇಲಿ ಮೋದದೇ ನಲಿಯುವ ಸುಖದೇ ||
ಚನ್ನ—ಈ ಮಹದಾಗಸ ಸಂಸಾರದೊಳು – ಅಮರ ಜೀವನದ ಪಟವನೆ ತೂರೀ ||
ಗಂಗವ್ವ—ವಿಮಲ ಪ್ರೇಮದಾ ಸೂತ್ರವ ಪಿಡಿದೂ – ಯಮನೆದೆಗೆಡಿಸುತೆ ಚಿರಂತ ನಲಿವಾ ||

ಗಂಗವ್ವ—ದೇವ್ರು ಅಂಥಾ ಸುಖ್ದ ದಿನಾನೇ ತರ್ಲೀ ಚನ್ನಾ ಬೇಗ.

ಸಂಕಪ್ಪ—(ಪ್ರವೇಶಿಸಿ, ಇಬ್ಬರನ್ನೂ ನೋಡಿ ಮುಖ ಮುಚ್ಚಿಕೊಂಡು) ದೇವ್ರೇ ! ನಾನೀ ಜೋಡಿ ಹಕ್ಕಿಗಳ ಎಣೆಯನ್ನ ಹಣಕ್ಕಾಗಿ ಸೂರೆಮಾಡಲೇ ? ಬೇಡ–ನಂಗೆ ಹಣಾ ಬೇಡ, ಸಂಪತ್ತು ಬೇಡ, ಈ ಬಡ್ತನದ ಬಾಳೇ ಸಾಕು. ನನ್ಮಗಳಿಗೆ ಈ ಪ್ರೇಮದ ಸಂಸಾರವೇ ಸಾಕು. (ಗಟ್ಟಿಯಾಗಿ ಹುಚ್ಚನಂತೆ) ಬೇಡ, ಬೇಡ, ನನಗಾ ಶ್ರೀಮಂತರ ಸಂಬಂಧ ಬೇಡ, ಈ ಎಣೆಯನ್ನ ತಪ್ಸಿ ಬರತಕ್ಕ ದುಃಖದ ಬಾಳು ಬೇಡ.

(ಗಂಗವ್ವ–ಚನ್ನ ಈರ್ವರೂ ಜಗ್ಗನೆದ್ದು ದೂರ ಸರಿದು ನಿಲ್ಲುವರು)

ಸಂಕಪ್ಪ—ನನ್ನನ್ನ ತನ್ನ ಸಂಪತ್ತಿನ ಮುಂದೆ ಕುಣ್ಸಬೇಕೂ ಅಂತ ಸಾವ್ಕಾರಾ ಈ ಎಲ್ಲಾ ಆಟವನ್ನ ಆಡಿದನಂತ ಕಾಣತ್ತೆ. ಹೌದು, ಅದಕ್ಕಾಗಿಯೇ

ಈ ಸಾಲ್ದ ಶೂಲವನ್ನ ನನ್ನೆದೇಲಿ ತಿವ್ದ. ಅಬ್ಬಬ್ಬಾ! ಅವನ ವಿಕಟ ಪರಿಹಾಸ್ಯ ನನ್ನ ಕಣ್ಣೀಗೆ ಕಟ್ಟದೆ....ಆದ್ರೆ ನನ್ನೀ ಸಂಸಾರದ ಬಾಳಿನ ಗೋಳ್ಮಾತ್ರ ಆ ಕೆಟ್ಟ ಶಿವನ ಕಣ್ಣೀಗೆ ಬಿದ್ದೀ ಇಲ್ಲ. ನಾನೀಗೇನು ಮಾಡ್ಲಿ ? .... ಯಾರೀಗೆ ಕೂಕ್ಕೊಳ್ಳಲೀ !

ಗಂಗವ್ವ—ಅಪ್ಪಾ - ಅಪ್ಪಾ. (ಭಯ ಮತ್ತು ನಾಚಿಕೆಯಿಂದ ಒಂದೊಂದೇ ಹೆಜ್ಜೆ ಹತ್ತಿರ ಬರುವಳು.)

ಚನ್ನ—ಮಾವಾ....ಮಾವಾ. (ವಿನಯ ಮತ್ತು ನಾಚಿಕೆಯಿಂದ ಒಂದೊಂದೇ ಹೆಜ್ಜೆ ಹತ್ತಿರ ಬರುವನು.)

ಗಂಗವ್ವ—ಅಪ್ಪಾ ! ಸಿಟ್ಟಾಗ್ಬೇಡ್ರಪ್ಪಾ .... ನಿಮ್ಮ ದಮ್ಮಯ್ಯ. (ಸಂಕಪ್ಪನು ಮಗಳನ್ನಪ್ಪುವನು.)

ಚನ್ನ—ಮಾವಾ ! ತಪ್ಪು ನನ್ನದು....ದಯವಿಟ್ಟು ಕ್ಷಮಿಸಿರಿ ಇದೊಮ್ಮೆ. (ಸಂಕಪ್ಪನು ಚನ್ನನನ್ನಪ್ಪುವನು.)

ಗಂಗವ್ವ ...ಇನ್ನೆಂದೂ ನಿಮ್ಮಾತಿಗೆ ವಿರುದ್ಧ ನಡೆಯೋದಿಲ್ಲಪ್ಪಾ ನಾನು.

ಚನ್ನ—ಹೌದು ಮಾವಾ .... ಇಂದಿನಿಂದ ಬೇಕಾದರೆ ನಾವು ಒಬ್ಬರ ಕೂಡ ಒಬ್ಬರು ಮಾತೂ ಆಡೋದಿಲ್ಲ.

ಸಂಕಪ್ಪ—ಇದೇನಪ್ಪಾ ನಿಮ್ಮ ಹುಚ್ಚುತನ ! ನಾನು ನಿಮ್ಮ ಸಲಿಗೆಯ ಆಟಕ್ಕಾಗಿ ಗೋಳಿಟ್ಟಿಲ್ಲ. ಆ ಸಾವ್ಕಾರನ ದುಷ್ಟವರ್ತನೆಗಾಗಿ ಅತ್ತೆ ಅಷ್ಟೆ. ನೀವು ದುಃಖಿಸದಿರ್ರಪ್ಪಾ. ಇಂದಲ್ಲ ನಾಳೆಯಾದರೂ ನೀವು ಮದ್ವೇ ಆಗತಕ್ಕವ್ರೇ....ಕೂಡಿ ಬಾಳತಕ್ಕವ್ರೇ.

ಚನ್ನ—ಮಾವಾ .... ಸಾವ್ಕಾರ್ರುದೇನಂದ್ರು ? ಸಾಲಾ ಕೂಡ್ಲೇ ತೀರ್ಸ ಬೇಕಂತೇನು ?

ಸಂಕಪ್ಪ—ಆತ ಅನ್ನೋದಕ್ಕಷ್ಟು ಬೆಂಕಿ ಹಚ್ಚಿತು, ಅಯ್ಯೋ! ಅದನ್ನ

ನಾನು ಹ್ಯಾಂಗೆ ಬಾಯ್ಬಿಟ್ಟು ಹೇಳ್ಳಪ್ಪಾ ? ಬೇಡಪ್ಪಾ .... ಅದನ್ನ ನೀವು ಕೇಳ್ದೇ ಇರೋದೇ ಒಳ್ಳೇದು.

ಗಂಗವ್ವ—ಇರಲಪ್ಪಾ ಹೇಳು .... .... ಅವ್ರೇನಂದ್ರು .... ನಮ್ಮಲ್ಲೂ ಅದನ್ನ ಮುಚ್ಚಿಡಬೇಕೇ ?

ಸಂಕಪ್ಪ—ಏನು ಹೇಳ್ಳಮ್ಮಾ...ನಿನ್ನನ್ನ ಆತ್ಗೆ ಮದ್ವೇ ಮಾಡಿಕೊಡ್ಬೇಕಂತೆ.... ಈ ನನ್ನ ಪ್ರೇಮ್ನ ಚನ್ನನ್ನ ದಾರೀ ಮ್ಯಾಲೆ ಹಾಕ್ಬೇಕಂತೆ !

ಗಂಗವ್ವ—ಇಲ್ದೇ ಇದ್ರೆ ?

ಸಂಕಪ್ಪ—ಮತ್ತೇನು ? ಆತ ತನ್ನ ಹಣ್ದ ಬೆದ್ರಿಕೆ ತೋರ್ಸಲಿಕ್ಕೆ ಹತ್ತದಾ, ತನ್ನ ಹಣಾ ನೂರೈವತ್ತಲ್ಲಾ-ಮುನ್ನೂರೂ ಅಂದ. ಅದನ್ನೂ ಕೂಡ್ಲೇ ಕೊಟ್ಟುಬಿಡ್ಬೇಕಂತೆ .... ಇಲ್ಲವಾದರೆ ....

ಚನ್ನ—ನೀವೇನಂದ್ರಿ ಮಾವಾ .... ಸಾವ್ಕಾರ್ರೀಗೆ ಮದ್ವೇಗೊಪ್ಪಿದಿರೇನು ?

ಸಂಕಪ್ಪ—ಇದ್ಯಾಕೆ ಚನ್ನಾ....ನನ್ನನ್ನೇನು ನೀನು ಕಟ್ಕಾ ಅಂತ ತಿಳ್ದ್ಯೇನು ? ನಾಲ್ಗೆ ಸಾವ್ಕಾರ್ರಿಗೆ ಮಾತ್ರಾ ಅಲ್ಲಾ-ನನ್ಗೂ ಇದೆ; ಹೃದಯ ಶ್ರೀಮಂತ್ರೀಗೆ ಮಾತ್ರಾ ಅಲ್ಲಾ-ಗರೀಬರಿಗೂ ಇದೆ. ಪ್ರೇಮಾ ಐಶ್ವರ್ಯವಂತ್ರಲ್ಲಿ ಮಾತ್ರ ಅಲ್ಲಾ- ಬಡ್ವರಲ್ಲೂ ಇದೆ. ನಮ್ಮಲ್ಲಿಲ್ಲದೇ ಇರೋದಂದ್ರೆ ಹಣಾ ಮಾತ್ರ....ಈಗ ಆ ಹಣಕ್ಕಾಗೆ ನಾನು ನನ್ನ ಜೀವ್ನವನ್ನೇ ಸಾವ್ಕಾರನಲ್ಲಿ ಮಾರಾಟ ಮಾಡ್ಬೇಕಂತೀಯೇನು ನೀನು ?

ಚನ್ನ—ಬೇಡ ಮಾವಾ .... ನನಗಾಗಿ ನೀವು ಸಾವ್ಕಾರ್ರಲ್ಲಿ ನಿಷ್ಠೂರಾ ಹೊತ್ಕೋಬ್ಯಾಡೀ. ಗಂಗವ್ವನ ಜೀವನದ ಸುಖದ ಹಾದೀಲಿ ಮುಳ್ಳು ಹಾಸಿಗೆಯನ್ನ ಹಾಸಬ್ಯಾಡ್ರಿ .... ಅವರು ಮುನಿದರೆ ಈ ಮುನ್ನೂರೇ ಅಲ್ಲ-ಅದೇ ಮೂರು ಸಾವಿರ ಆದ್ರೂ ಆಗಬಹುದು ! ಇದರಿಂದ ಯಾರಿಗೆ ಸುಖಾ ಇದೆ ಹೇಳ್ರಿ ? ಆದ್ದರಿಂದ ನಾನನ್ನೋದಂದ್ರೆ ನೀವು ಸಂತೋಷದಿಂದ ಮಗಳನ್ನ ಸಾವ್ಕಾರ್ರಿಗೆ........

ಗಂಗವ್ವ—ಹಾಂ-ಚನ್ನಾ ! ಆದೇನೋ....ಆದು ಸಾಕು. ಆ ಸಾವ್ಕಾರ್ರ ಸಂಪತ್ತು ಅವರಲ್ಲೇ ಇರ್ಲಿ. ನನ್ಗೇನೂ ಅದರ ಗೊಡ್ವೆ ಇಲ್ಲ....ಅವರ ಒಂದು ಚಿಕ್ಕಾಸೂ ನನಗೆ ಬೇಡ. ಚನ್ನಾ, ಇದೇನ್ಚನ್ನಾ, ಬಡತನ ಕ್ಕಾಗಿ ನೀನು ನಿನ್ನ ನಂಬಿದ ಹೆಂಡ್ತಿಯನ್ನ ಸಾವ್ಕಾರ್ರಿಗೆ ಮಾರಾಟ ಮಾಡ್ತಿಯೇನು ? ಬೇಡ ಕಣೋ-ಅವ್ರಾ ಮಹಡೀಮನೇ, ಸಂಪತ್ತಿನ ಸೌಧ ನನ್ಗೆ ಬೇಡ. ನನ್ಗೆ ನಿನ್ನ ಪ್ರೇಮದಲ್ಲಿ ಈ ಹಾಳು ಗುಡಸ್ಲೇ ಸಾಕು.

ಚನ್ನ—ಗಂಗೀ! ನೀನು ನನ್ಗಾಗಿ ಉರೀತಿರುವ ಬೆಂಕಿಯಲ್ಲಿ ಹಾರ್ಕೋ ಬ್ಯಾಡ. ಬಿಡೂ....ನನ್ನ ಆಶೇನ ಬಿಡು .... ನಾನೆಲ್ಲಾದ್ರೂ ಕೆಲ್ಸಾ ಮಾಡ್ಕೊಂಡು ಜೀವ್ನ ನಡಸ್ತೇನೆ. ಗಂಗೀ....ಮಾವಾ....ಬರ್ತೇನೆ.... ನಮ....ಸ್ಕಾರಾ....(ಹೊರಡಲುದ್ಯುಕ್ತನಾಗುವನು.)

ಸಂಕಪ್ಪ—ಚನ್ನಾ-ಬಾ ಇಲ್ಲೀ (ಕೈ ಹಿಡಿದು) ನಿಮ್ಮದ್ವೇ ಶಿವ ನಡ್ಸದಾಗ, ಮೂರ್ತಾ ಕೂಡ್ದಾಗ ಆಗ್ಲೀ....ಆದ್ರೆ ಇಂದು ಈ ಗಂಗಿಯ ಕೈಯನ್ನ ನಿನ್ನ ಕೈಯಲ್ಲಿರಸ್ತೇನೆ ನಾನು. ಇವಳನ್ನ ನಾನು ನಿನ್ಗಾಗಿಯೇ ಕಾದಿಟ್ಟಿದ್ದು. ಇವ್ಳು ಯಾವಾಗ್ಲೂ ನಿನ್ನವ್ಳೇ. ಮದ್ವೇ ಒಂದಾಗದಿದ್ದ ಮಾತ್ರಕ್ಕೇ ಅವಳ ಸಂಬಂಧ ಕಡೀಲಾರೆ ನೀನು. ಬ್ರಹ್ಮ ನಿನಗಾಗಿಯೇ ಗಂಗೆಯನ್ನ-ಗಂಗೆಗಾಗಿಯೇ ನಿನ್ನನ್ನ ಜತೆ ಮಾಡಿ ನನ್ನ ಕೈಗಿತ್ತಿದ್ದಾನೆ. ಈ ನಿಮ್ಮ ಸಂಬಂಧವನ್ನ ಯಾರೂ ಕಡೀಲಾರೂ ಕಾಣಪ್ಪಾ. ನೋಡು, ಸಾವ್ಕಾರ್ನ ದಂಡು ಬರ್ಲಿ, ಗೌಡ್ನ ಕತ್ತೀ ಬರ್ಲಿ, ಮಾರಾಜ್ನ ಜೈಲ್‌ಖಾನೆ ಆಗ್ಲೀ, ನಾನಂತೂ ಆದ್ಕೆಲ್ಲಾ ಹೆದ್ರಿ ಇವಳನ್ನ ನಿನ್ನಿಂದ ತಪ್ಸೋದಿಲ್ಲ. ಇದ್ಕೆ ಒಕ್ಕಲಮಕ್ಳ ದೇವ್ರಾದ ಆ ಬಸವಣ್ಣಗಳೇ ಸಾಕ್ಷಿ. ಎತ್ತಿನ ತಾಯಾದ ಗೋಮಾತ್ಯೇ ಸಾಕ್ಷಿ. ನಮ್ಮ ಬೆನ್ನೆಲುಬಾದ ನೇಗ್ಲೇ ಸಾಕ್ಷಿ. ಇಬ್ಬರ ಕೈಗಳನ್ನೂ ಕೂಡಿಸುವನು. ಈರ್ವರೂ ಸಂಕಪ್ಪನನ್ನು ತಬ್ಬಿ ನಮಸ್ಕರಿಸುವರು.)

[ತೆರೆ ಬೀಳುವುದು]

## ನೋಟ ೨

[ ಶಿವಗ್ರಾಮದ ಒಂದು ಬೀದಿ. ಮುದ್ದಜ್ಜನು ಪ್ರವೇಶಿಸುವನು. ]

ಮುದ್ದಜ್ಜ—ಈ ಮಕ್ಕಳ ಹುಚ್ಕೊಂದು ಅಮ್ಮಾವ್ರೀಗೆ ಹಿಡ್ದು ಎಷ್ಟೋ ಜನ ಉದ್ಧಾರಾಗಿಹೋದ್ರು. ಪಾಪ, ಹಗ್ಲೂ ರಾತ್ರೂ ಇವರೀಗೆ ಅದೇ ಯೋಚ್ನೆ. ಸಾಲದ್ದಕ್ಕೆ ಈಗ ಇದೊಬ್ಬರು ಅಯ್ಯನೋರು ಸಾರಥಿಯಾಗಿ ದ್ದಾರೆ ಅವರೀಗೆ. ಈ ಅಯ್ಯನೋರ ಚಾಳಿಯಂತೂ ನನ್ಗೆ ಚೆನ್ನಾಗಿ ತೋರಾಕಿಲ್ಲ. ಅವ್ರಾ-ಅವ್ರಾ ಅಂತ್ಲೇ ಇವರೊಂದಿನಾ ಎಲ್ಲಿ ಕೈಕೊಡ ತಾರೋ, ನನಗಂತೂ ತಿಳಿಯೋಕಿಲ್ಲ. ಅಮ್ಮಾವ್ರೋ, ತೊಳದಿಟ್ಟ ಪುತ್ಥಳೀ ಚೆನ್ನ. ಆದ್ರೆ ಇವ್ರು ಎಲ್ರೂ ತಮ್ಮಂತ್ಲೇ ಅಂತ ತಿಳಕೋ ತಾರೆ. ಅಂದವಮ್ಯಾಗೆ ನಾ ಹ್ಯಾಂಗ್ಹೇಳ್ಳಪ್ಪ ಇವರೀಗೆ? ಆಗ್ಲಿ, ಸುಮ್ಕೇ ನೋಡ್ತಲೇ ಇರ್ತೀನಿ....ಒಂದಿನಾ ಹೇಳಿಯೇಬಿಡ್ತೇನೆ ಸ್ವಾಮಿಯೋರಿಗೆ, ನಿಮ್ಮ ಚಾಳಿ ಎಲ್ಲಾ ಚೆನ್ನಾಗಿಲ್ಲಾ ಅಂತ. (ನೋಡಿ) ಹಾಂ....ಬಂದ್ರ ಲ್ಲಪ್ಪಾ ಅವ್ರೇ! ಯಾವ ಕಡೇ ಹೊರಟಿತೋ ಸವಾರಿ....ಲಾ.. ಲಾ.... ಲಾ....ಲಾ....ಕಾಲಪಾದಕೀ, ಜೋಡು ಹೋಗಿ ಬೂಟೀಸ್ ಬಂದ ದಲ್ಲಪ್ಪಾ ಪತ್ತೇ. ಬುದ್ಧೀ! ಪಾದಕ್ಕೆ ಬಿದ್ದೀನ್ರೀ ಬುದ್ಧೀ.

ಸಂಗಯ್ಯ—ಏನಪ್ಪಾ ಮುದ್ದಪ್ಪಾ....ಯಾವ ಕಡೆ ಹೊರಟಿದ್ದಿಯಪ್ಪಾ ಇಷ್ಟು ಬಿರ್ನಾಗಿ? ಅಮ್ಮಾವ್ರು ಕ್ಷೇಮವೇನು?

ಮುದ್ದಜ್ಜ—(ಸ್ವ) ಯಾಕೆ, ಇವ್ರೀಗೆ ಅಮ್ಮಾವ್ರ ಮುಂದೆ ಅಪ್ಪಾವ್ರ ನೆನಪೇ ಆಗೋದಿಲ್ಲ. (ಪ್ರ) ವೈನಾಗದಾರ್ರೀ. ತಮ್ಮನ್ನೇ ಕರ್ಕೊಂಡು ಬಾ ಅಂತ ಅಂದ್ರು ಬುದ್ಧೀ–ಬಂದೆ.

ಸಂಗಯ್ಯ—ಆಗಲಪ್ಪಾ-ಈಗಲೇ ಬರ್ತೇನೆ ಇಲ್ಲೇ ಒಂದು ಮನೇಲಿ ಗೃಹ ಶಾಂತಿ ಸ್ವಲ್ಪ ಮಾಡ್ಸೋದದೆ, ಮುಗ್ಸಕೊಂಡು ಬಂದೇಬಿಟ್ಟೆ.

ಮುದ್ದಜ್ಜ—ಆಗಲ್ರೀ ಬುದ್ಧೀ. ಆಂ....ಇದೇನ್ಬುದ್ಧಿ ಜೇಬ್ನಲ್ಲಿ? ಬೀಡ್ಯೆನೋ? ಕೊಡ್ತೀರೇನೊಂದು ಮುದ್ಕಂಗೆ?

ಸಂಗಯ್ಯ—ಆಂ-ಸಿಗರೇಟ್ ! ಬೇಕೇನು ?

ಮುದ್ದಜ್ಜ—ಆಂ....ಸಿರ್‌ದೇಟ್ ! ಅಂದ್ರೇ-ಬಿಳೀ ಬತ್ತೀ ಅಲ್ಲೇನು ? ಅದು ಭಾರಿ ಕಿಮ್ಮತ್ತಿಂದೇನೋ ? ನಮುಗ್ಯಾಕ ಸ್ವಾಮೀ .... ಅದೆಲ್ಲಾ ದೊರೀಗಳ್ಸೇದೋದು ?

ಸಂಗಯ್ಯ—ದೊರಿಗಳೇ ಯಾಕಪ್ಪಾ ? ಇದೇನವ್ರೀಗೇ ಅಂತ ರಿಜಿಷ್ಟ್ರು ಆಗೀದೇನು ? ದುಡ್ಡಿದ್ದೋರೆಲ್ರೂ ಸೇದೋದೇ ! ತಗೋ ನೀನೂ ಒಂದು ಸೇದಿ ನೋಡು, ಇದರ ಪರಿಮಳ ಹ್ಯಾಗದೇ ನೋಡು.

ಮುದ್ದಜ್ಜ—ಕೊಡ್ರಿ ಸ್ವಾಮಿ - ಹಾಗಾದ್ರಿಲ್ಲೊಂದು. (ಬತ್ತೀ ಹಚ್ಚಿ) ಲಾ—ಲಾ ಹ್ಯಾಂಗೈತೆ ನೋಡಿ ಸ್ವಾಮೀ ಇದರ ಹೊಗೀ ? ಬುದ್ದೀ....ಆದ್ರೆ ನಮ್ಮಸಿದ್ದೂಸಾಬೀ ಬೀಡೀ ಹಾಂಗೇನ ಖಾರಾಗಿಲ್ಲ ಇದು.

ಸಂಗಯ್ಯ—(ತಾನೂ ಒಂದು ಸೇದುತ್ತ) ನೀನು ಶುದ್ಧ ಹಳ್ಳಿ ಮಡ್ಡ ? ನಿನ್ಗೆ ಗೊತ್ತಿರೋದೇ ಆ ಸಿದ್ದೂಸಾಬಿ ಬೀಡಿ, ಮತ್ತಾ ಹಳ್ಳಿಯ ಹುಂಬರ ಚಿಲುಮೆ. ಅದು ಸೇದೋದು, ಕೆಮ್ಮೋದು. ನೋಡು, ಇದ್ರಲ್ಲೇ ನಾದ್ರೂ ಅಂಥಾ ದೋಷಾ ಉಂಟೋ ನೋಡು. ಇದು ಕೈಗೆ ಶೋಭೆ, ಮೂಗಿಗೆ ಪರಿಮಳ, ಹೃದಯಕ್ಕೆ ಆನಂದ.

ಮುದ್ದಜ್ಜ—ಏನು ಸ್ವಾಮೀ, ನೀವಾ ಹಳ್ಳಿಯ ಚಿಲಮೆಯನ್ನ ದೂರ್ತಿರೇನು ? ನಾವು ಕಂಡದ್ದೇ ಈ ಬೀಡಿ-ಈ ಚಿಲುಮೆ, ತಪ್ಪಿದ್ರೆ ಸಾಧುಗಳ ಗುಡು ಗುಡಿ. ಅದ್ರ ಚಿಲುಮೇಗೆ ಸೊಪ್ಪು ಹಾಕಿ ಅಗ್ಗಿಷ್ಟಿಕೇ ಏರ್ಸಿ ಸೇದಲಿಕ್ಕೆ ತೊಡಗಿದ್ವೊ ಅಂದ್ರೆ ಈ ನಿಮ್ಮ ಸಿರ್ದೇಟ್ ಯಾತಕ್ಕ ನಿಂತೀತ್ರೀ ಸ್ವಾಮಿ ಅದರ ಮುಂದೆ ? ಮೂರು .... ಮೂರು ಲೋಕಾನೆಲ್ಲ ಹಾಂಗೇ ತೋರ್ತಾ ಇರ್ತದೆ.

ಸಂಗಯ್ಯ—ಅಂದ್ರೇನು ? ನೀನು ಸೊಪ್ಪೋ ಅಂತ ಅಂದ್ರೆ ಭಂಗೀ ಸೊಪ್ಪಂತೀಯೇನು ?

ಮುದ್ದಜ್ಜ—ಅಂ-ಅದೇ ! ರಾಮಪತ್ರೆ ಸ್ವಾಮೀ ?

ಸಂಗಯ್ಯ—ಛೇ – ಅದು ಅಸಭ್ಯ ಜನ್ರು ಸೇದತಕ್ಕದ್ದು....ನಮ್ಮಂಥಾ ಸುಧಾರಿಸಿದೋರಲ್ಲಾ !

ಮುದ್ದಜ್ಜ—ಓಹೋಹೋ ! ಬಿಡೀ ಸ್ವಾಮಿಗಳಾ ! ಆ ಭಂಗೀ ಭಕ್ತೀ ವಿಚಾರ ನಿಮಗೇನು ಗೊತ್ತಿದೆ ಸ್ವಾಮೀ ? ಕೇಳಿದ್ದೀರೇನು....ನಮ ಹಿರಿಯರನ್ನೋದು, ಹೇಳ್ತೇನೆ ಕೇಳಿ.

## ಲಾವಣಿ

ಸುಮ್ಮನೆ ದೊರೆವುದೆ ಮುಕ್ತೀ । ಗಮ್ಮನೆ ಸೇದದೆ ಭಂಗಿಯ
ಬತ್ತೀ ॥ ಪ ॥

ಸಾಧನ ಸಂಪತ್ತಿ ಬೇಕು । (ತಮ್ಮ) ಆದಾಯ ಉಳಿತಾಯ
ಅಳಿದರೆ ಸಾಕು ॥ ೧ ॥

ಸಾಧುಸಂತರನತ್ತ ನೂಕು । (ತಮ್ಮ) ಸದನಕ್ಕೆ ಶರಣೆಂದ
ಗೆಣೆಯರೆ ಸಾಕು ॥ ೨ ॥

ಹೊಲ ಮನೆ ನಗನಾಣ್ಯವ್ಯಾಕೆ । ಹಾಳು ಗುಡಿ ಕಟ್ಟಿ
ಜಗಲಿಯು ಕಾದಿರಲಿಕ್ಕೆ ॥ ೩ ॥

ಹೆಸರಾಂತ ಸೊಪ್ಪಿರಬೇಕು । ಒಳ್ಳೆ ಹಸನಾದ ಗುಡುಗುಡಿ
ಚಿಲುಮೆಗೆ ಜೋಕು ॥ ೪ ॥

ತೀವಿ ರಾಮಪತ್ರೆ ಹಾಕೀ । ಬಲು ಶೀವಿಯಲಗ್ನಿಯ
ಜ್ವಾಲಿಪಂತೆ ದೂಕಿ ॥ ೫ ॥

ಎತ್ತಿ ಆದೀಶಕ್ತಿ ಭಿತ್ತಿ । ತನ್ನ ನೆತ್ತಿಗೆ ಸೇರ್ವಂತೆ ಎಳೆಯುದೆ
ಬತ್ತಿ ॥ ೬ ॥

ಆಗಮ ಶಾಸ್ತ್ರಗಳೆಲ್ಲಾ । ತಾವಾಗಿಯೆ ನಲಿವುವು
ಜಿಂಹೆಯೊಳೆಲ್ಲಾ ॥ ೭ ॥

ಮೀಟಿ ತಂಬೂರಿ ತಾಳ ದಮಡೀ । ನೋಡು ಲೂಟಿಯ
ದಲ್ಲಿಯೇ ಭಕ್ತಿಯ ಶೋಡಿ ॥ ೮ ॥

ಹುಟ್ಟು ಸಾವೂ ನೋವು ನಾಶ | ಮತ್ತೆ ಇಷ್ಟೆಲ್ಲ ಇರೆ
ಮುಕ್ತಿ ನಿನ್ನೊಳೆ ವಾಸಾ || ೯ ||

ಯಾರಿಗೂ ಒಲಿದಿಲ್ಲ ಶಿವನೂ | ಸೂರೆಗೊಂಡಿಹನಾತನ
ಗುಡುಗುಡೀಧವನೂ || ೧೦ ||

ನಾ ನೀನೆಂಬುವ ಭ್ರಾಂತಿ ಬಿಡಿಸೀ | ತಾನೇ ಶಿವನೆಂಬ
ಸಮರಸಭಾವದೊಳಿರಿಸಿ || ೧೧ ||

ಶಿವಶಕ್ತಿ ಬೇರಿಹರೆಲ್ಲೀ | ತಾನೆ ಶಿವಶಕ್ತಿ ಕರತಲ
ವಾಗಿರಲಿಲ್ಲಿ || ೧೨ ||

ಪರಮಾರ್ಥಸಾಧಕರೆಲ್ಲ | ಪಿರಿದೆಂದು ಸಾರಿದ ಭಂಗಿ
ಇದಲ್ಲಾ || ೧೩ ||

ಗುರುವಿತ್ತ ಭಂಗಿಯೆ ಬೇರೆ | ಹೃದಯದ ಗುಡುಗುಡಿ
ಜ್ಯೋತಿಯ ಸೇರೆ || ೧೪ ||

ಗುರುಮಂತ್ರವೆನ್ನುವ ಭಂಗೀ | ಇದನರಿಯಲು ಭವ
ಭಯ ಪೋಪುದು ಹಿಂಗಿ || ೧೫ ||

ಪರಿಶುದ್ಧ ಹೃದಯವೆ ಚಿಲುಮೆ | ಈ ಹೃದಯದ
ಜ್ಯೋತಿಲೆ ಆ ಶಿವನೊಲುಮೆ || ೧೬ ||

ಪಿರಿದಾದ ತತ್ವವನೆಲ್ಲ | ಈ ಪರಮೇಶದಾಸರು
ಮರೆತೀಹರಲ್ಲಾ || ೧೭ ||

ಸಂಗಯ್ಯ—ಮುದ್ದಪ್ಪ, ಈ ಹಾಡಿನ ಅರ್ಥೇನೋ ಚೆನ್ನಾಗಿದೆ. ಆದರೆ ನಿನ್ನ ಹಿರಿಯರು ಆ ಭಂಗಿಗೆ ಆ ಹೆಸರು ಕೊಟ್ಟಿಲ್ಲ. ಅವರು ಹೇಳಿದ್ದು ಜ್ಞಾನದ ಬತ್ತೀ. ಭಂಗೀ ಅಂದರೆ ಉಪದೇಶವಾದ ಗುರುವಿನ ಮಂತ್ರ ಕೇಳ್ತೀನು ? ಅದೆಲ್ಲಾ ಸಾಧಕರೀಗೆ ಕಾಣಪ್ಪಾ.

ಮುದ್ದಜ್ಜ—ಹಾಂ ಹಾಂ! ಅದೆಲ್ಲಾ ಸಾಧಕರೀಗೆ....ಮತ್ತಿದೆಲ್ಲಾ (ಸಿಗ್ರೇಟ್ ತೋರ್‍ಸಿ) ಬಾಧಕರಿಗೋ ಯೇನೋ, ಅಲ್ವೇನು ? ಅಲ್ಲ ಸ್ವಾಮಿಗಳಾ! ತಮ್ಮ ಹಿರಿಯರು -- ತಮ್ಮ ಗುರುಗಳೂ ಇದೇ ಬಿಳೀ ಬತ್ತೀ ಸೇತ್ತಿದ್ದ

ರೇನು ? ಬೀಡೀ ಕುಡೀತಾ ಇದ್ದರೇನು ? ಯಾವ ಪುರಾಣದಲ್ಲಿ ಹೇಳಿದೆ ಸ್ವಾಮೀ ಈ ಬತ್ತೀ ಮಹತ್ವಾ ?

ಸಂಗಯ್ಯ—ಇಲ್ಲಪ್ಪಾ .... ಇದು ಪುರಾಣದಲ್ಲಿ ಹೇಳಿದ್ದಲ್ಲ, ಏನೋ ಒಂದು ಚಟಾ ಅಷ್ಟೆ.

ಮುದ್ದಜ್ಜ—ಇದೆಂತಾ ಹಾಳು ಚಟಾ ಸ್ವಾಮೀ ? ಈ ಚಟದ ಜೊತೀಗೆ ಪಾಪ್ದ ಘಟವೂ ಒಂದು ತಲೇಮ್ಯಾಲೆ ಹೊರ್ತಾ ಇದೀರ್ರಲ್ಲಪ್ಪಾ ! ಹಣೇ ಮ್ಯಾಲೆ ನೋಡಿದರೆ ವಿಭೂತಿ, ಕೊರಳಾಗ ನೋಡಿದರೆ ರುದ್ರಾಕ್ಷಿ ಸರ ; ಕೈಯಲ್ಲೋ–ಪೂಜೆಗ್ಯೊತಿರೋ ಬಿಲ್ವಪತ್ರೆ ತುಂಬೇಹುವ್ವು ! ಅಲ್ಲಾ ಸ್ವಾಮೀ ! ಆ ಎಂಜಲ ಕೈಯಲ್ಲೇ ಈ ಪತ್ರೇ ಹೂ ಒಯ್ದು ಶಿವಾರ್ಚನೇ ಮಾಡ್ತೀರಲ್ಲಾ – ಅದೇನು ಹರಕೆ ಹೊತ್ತಿದ್ರೇನು ನೀವು – ಮಾದೇವಗೆ ಎಂಜಲರ್ಚನೇ ಮಾಡ್ತೀನಂತ ?

ಸಂಗಯ್ಯ—ಮುದ್ದಾ....ನಿನಗೇನು ತಿಳಿಯುತ್ತೋ ? ನಾವು ಜಂಗಮರು. ಅಯ್ಯನೋರು. ನಮಗೆ ಎಂಜಲು ಮುಸರೆ ಯಾವ್ದೂ ಇಲ್ಲ–ಗೊತ್ತಾ ಯ್ತೇನು ? ನಾವು ಮುಟ್ಟಿದ್ದೆಲ್ಲಾ ಪವಿತ್ರ ಕಣೋ !

ಮುದ್ದಜ್ಜ—ಹಾಂ....ಇದೀಗ ಸರಿ. ತಾವು ಹೀಂಗೇ ಹೇಳ್ತಾ ಹೋಗ್ರಿ ಸ್ವಾಮಿ....ತಮ್ಮ ಭಕ್ತರೀಗೆಲ್ಲಾ ತಿಳಿಯೋಕಿಲ್ಲ ತಮ್ಮ ಪ್ರಭಾವ.

ಸಂಗಯ್ಯ—ಅದನ್ನೆಲ್ಲಾ ನೀನು ಹೇಳೋದು ಬೇಡವಯ್ಯಾ .... ನಮ್ಮ ಭಕ್ತರೀಗೆ ಗೊತ್ತೇ ಉಂಟು ನಮ್ಮ ವಿಚಾರ. ಜಂಗಮರು ಮಾತಾಡೋ ದೇವ್ರು, ಪರಮೇಶ್ವರನ ಅಪರಾವತಾರ–ತಿಳೀತೇನು ?

ಮುದ್ದಜ್ಜ—ಹೌದು ಸ್ವಾಮೀ–ಗೊತ್ತದೆ. ಆದರೆ ಜಂಗಮ್ರು ದೇವ್ರಾಗ್ಯೇ ಇರೋಕೆ ಪ್ರಯತ್ನ ಮಾಡ್ಬೇಕು....ಗುರುಗಳಂತ್ಲೇ ಜೀವನ ನಡಸ್ಬೇಕು; ಅಂದ್ರ ಮಾತ್ರ ಪರಮೇಶ್ವರ. ಅಂಥಾ ಅಯ್ಯನೋರೀಗೆ–ಸ್ವಾಮಿಗಳೀಗೆ ನನ್ನ ದೀರ್ಘದಂಡ ನಮುಸ್ಕಾರ ಸ್ವಾಮೀ. ಆದರೆ ಮಠಾಚಾರ್‍ರ

ತತ್ವಾನೂ ತಿಳೀದೇ, ಶಿವಶರಣರ ಆಚರ್ಣೇನೂ ಇಲ್ದೇ ಹೊಲ್ಸು ತುಂಬಿದ ಹೃದಯದವರು ಮಾತ್ರ ಅಯ್ಯನೋರೂ ಅಲ್ಲಾ, ಗುರುಗಳೂ ಅಲ್ಲಾ.

ಸಂಗಯ್ಯ—ಏ ಮುದ್ದಪ್ಪಾ ! ನೀನು ಗುರುಗಳನ್ನೇ ಟೀಕೆ ಮಾಡ್ತೀಯೇನು ? ನೋಡು....ಇಂದೇ ಸಾವ್ಕಾರ್ರಿಗೆ ಹೇಳಿ ನಿನ್ನನ್ನ ಮನೆಯಿಂದಲೇ ಹೊರಕ್ಕೆ ಹಾಕ್ಸಿಬಿಡ್ತೇನೆ ನೋಡು! ಜಾತಿಯಿಂದ ಬಹಿಷ್ಕಾರಾ ಹಾಕ್ಸಿ ಬಿಡ್ತೇನೆ ನೋಡು!!

ಮುದ್ದಜ್ಜ—ತಮಗ್ಯಾಕ್ ಸ್ವಾಮೀ ಸಿಟ್ಟೂ ! ನಾನಂದದ್ದು ಹೊಲ್ಸು ಕೆಲ್ಸಾ ಮಾಡೋ ಅಯ್ಯನೋರಿಗೆ.

ಸಂಗಯ್ಯ—ಏ ! ಅಯ್ಯನೋರೆಂತೋರೇ ಇದ್ರೂ ಪೂಜ್ಯರು ಕಣೋ, ಗುರುಗಳು ಕಣೋ. (ಹೋಗುವನು)

ಮುದ್ದಜ್ಜ—ಆಗಲೀ ಸ್ವಾಮೀ-ತಪ್ಪಿದೆ....ತಾವು ದಯಮಾಡ್ಸಿ. (ಹೋದನಂತ್ರ) ಹ್ಹಾ ಹ್ಹಾ ! ಕಾಲಗತೀರಪ್ಪಾ ಇದೂ-ಕಾಲಗತೀ ! ಇನ್ನೇನು, ನಾಸೀ ಅಯ್ಯನೋರು ಬೂಡ್ಸು ಚೊಣ್ಣಾ ಹಾಕ್ಕೊಂಡು ಶಿವಾರ್ಚನೆ ಮಾಡೋ ದ್ನೋಡ್ಬೇಕೋ ಏನೋ ಯಾರಿಗ್ಗೊತ್ತು ! (ಹೋಗುತ್ತ) ಇದೇನು. ನಾವ್ಕಾರ್ರು ಈ ಕಡೆಯಿಂದ್ಲೇ ಬಂದ್ರಲ್ಲಾ....ಆಗ್ಲಿ, ನಾನು ಹೋಗ್ತೇನೆ. (ಹೋಗುವನು.)

ಗಿರಿಯಪ್ಪ—(ಗೌಡರೊಡನೆ ಪ್ರವೇಶ) ಏನೇ ಆಗಲಿ ಗೌಡ್ರೇ, ಸಂಕಪ್ಪ ಕಾಳು ತುಳ್ಸತಲೇ ಕಣದಲ್ಲೇ ಅದನ್ನ ಜಪ್ತುಮಾಡಿಬಿಡಬೇಕು .... ಎಷ್ಟು ಜಂಭಾರೀ ಅವನದ್ದೂ ?

ಗೌಡ—ನಾನು ಮೊದಲೇ ಹೇಳ್ಳಿಲ್ವೇ ನಿಮ್ಗೇ, ಪೈರ್ ಕಟಾವಿಗೇ ಜಪ್ತು ತರ್ಸಿರೀ ಅಂತ ; ನೀವು ಹೆಣ್ಣೀಗೆ ಬಾಯ್ಬಿಟ್ಕೊಂಡು ಸುಮ್ನೇ ಕುಂತ್ರಿ.

ಗಿರಿಯಪ್ಪ—ಹಾಂಗಲ್ಲ ಗೌಡಾ ! ನಾನು, ಸಂಕಪ್ಪ ಇಂದಲ್ಲ ನಾಳೇನಾದ್ರೂ ನನ್ನ ಮಾತೀಗೆ ಒಪ್ಪಿಯಾನು ಅಂತಿದ್ದೆ. ಆದರೀಗೀಗ ಅಂವ ಹೇಳಿ ಕಳ್ಸಿದ್ರೂ ಬರೋದೇ ಕಷ್ಟ ಆಗಿದೆ !

ಗೌಡ—ಯಾತಕ್ಕೆ ಬಂದಾನ್ರೀ ? ಈ ವರ್ಷ ಬೆಳೆ ಚೆನ್ನಾಗಿದೆ, ಹ್ಯಾಗಿದ್ರೂ ನಿಮ್ದು ಸಾಲಾ ತೀರ್ಸಿಯೇಬಿಡ್ತೇನೆ ಅಂಬೋ ಡೌಲು ಇಟ್ಟಕೊಂಡಿರ ಬೇಕು. ಇರಲೀ, ಅವನ ಅಂಬೋಣ ಏನಂತೆ ?

ಗಿರಿಯಪ್ಪ—ಕಣ್ದ ಸುಗ್ಗಿ ಆಗ್ತಲೇ ಕಾಳು ಮಾರಾಟ ಮಾಡಿ ಹಣ ಮುಟ್ಟಸ ತಾನಂತೆ. ಅವನೇನು ಹಣಾ ಬರೇ ನೂರೈವತ್ತೇ ಅಂತ ತಿಳ್ದಿದ್ದಾನೋ ಏನೋ ! ಮುನ್ನೂರು-ಅದರ ಬಡ್ಡೀ-ಕೋರ್ಟು ಖರ್ಚು ಎಲ್ಲಾ ತೆರುವಷ್ಟಕ್ಕೆ ಕಣ್ದ ಕಾಳು ಮುಗ್ದಿರಬೇಕು....ಮತ್ತೆ ಕೇಣಿಯವರ ಕಾಳೀಗೆ ಗುಲಾಮಾ ಸಾಲಕ್ಕೆ ಹೊರಡಬೇಕು.

ಗೌಡ—ಆದರೂ ಅವನ ಪೈರು ಬಹು ಚನ್ನಾಗಿದೆ. ಈ ವರ್ಷ ಕಾಳೀನ ಕ್ರಯವೂ ಚೆನ್ನಾಗಿಯೇ ಇರೋದ್ರಿಂದ ಇನ್ನೂ ಏನಾದರೂ ಸ್ವಲ್ಪ ಅವನೀಗೆ ಉಳಿದರೂ ಉಳೀಬಹ್ದೋ ಏನೋ.

ಗಿರಿಯಪ್ಪ—ಆದಕ್ಕೇ ಕಾಳನ್ನ ಮಾರಾಟಕ್ಕೇ ಬಿಡಬಾರ್ದು ಆತನಿಗೆ ಅಂದದ್ದು. ಎಲ್ಲಾ ಸ್ಥಳದಲ್ಲಿಯೇ ಹರಾಜ್... ಎದ್ರು ಹರಾಜಿಗೆ ನಮ್ಮವ್ರೇ ನಾಲ್ಕು ಜನರನ್ನ ನಿಲ್ಸಿದರಾಯ್ತು. ಆದರೆ ಒಂದು ವಿಚಾರ ನೋಡೀ, ಈ ಎಲ್ಲಾ ಕೆಲ್ಸ ಮುಗಿಯೋವರೆಗೂ ನಮ್ದೊಂದು ಸುಳಿವೂ ಅವನೀಗೆ ಹತ್ತಕೂಡ್ದು. ನೋಟೀಸ್ ಇನ್ಕಾರ್ ಅಂತ ಮಾಡ್ಸಿ ಶಿವ್ಯಾ ಡಿಕ್ರಿ ತೆಗ್ದು ಒಮ್ಮೆಗೇ ಜಪ್ತೀಗೆ ತಂದುಬಿಡಬೇಕು.... ಏನಂತೀರಿ ?

ಗೌಡ—ಯೋಚನೆಯೇನೋ ಒಳ್ಳೇದೇ, ಆದರೆ ಇಷ್ಟೆಲ್ಲಾ ಕೆಲ್ಸಾ ಆಗ ಬೇಕಾದರೆ ಕೂಡಲೇ ಪ್ರಯತ್ನ ಮಾಡ್ಬೇಕು. ಇಂದೇ ಹೋಗ್ತೀರೇನು ವಕೀಲರ ಹತ್ರ ತುಮುಕೂರಿಗೆ ?

ಗಿರಿಯಪ್ಪ—ನನಗೆ ಸ್ವಲ್ಪ ಬೇರೆ ಕೆಲಸ ಇದೆ ಇನ್ನೂ ಮೂರು ನಾಲ್ಕು ದಿವ್ಸ. ದಯವಿಟ್ಟು ನೀವೇ ಹೋಗಿ ಬಂದುಬಿಡ್ರಿ. ರಿಕಾರ್ಡ್ ಕೊಡುತ್ತೇನೆ, ವಕೀಲರಿಗೊಂದು ಕಾಗದಾ ಕೊಡುತ್ತೇನೆ. ಎಲ್ಲಾ ಕೆಲಸ ತೀರಿಸಿ ಕೊಂಡು ಬಂದುಬಿಡ್ರಿ.

ಗೌಡ—ನಾನೇ ಹೋಗಿಬರ್ತಿದ್ದೆ, ಆದರೆ ನನಗೆ ಸ್ವಲ್ಪ ತೊಂದರೆಯಾಗಿ ಕುಂತದೇ. ನಿನ್ನೆ ನಮ್ಮ ರಾಮಯ್ಯನಿಂದ ಒಂದು ಪತ್ರ ಬಂದಿತ್ತು.... ಕೂಡ್ಲೇ ಐವತ್ತು ರೂಪಾಯ್ಯಿ ಕಳ್ಸಬೇಕೂ ಅಂತ. ಹುಡುಗರೀಗೆ ಏನು ಗೊತ್ತಾಗತ್ತೆ ಹೇಳ್ರಿ – ಸುಲಭವಾಗಿ ಬರದುಬಿಡ್ತಾರೆ. ಹಾಸ್ಟೇಲಿಗೆ ಇಪ್ಪತ್ತೂ, ಫೀಸ್ ಹನ್ನೆರಡೂ, ಪುಸ್ತಕಕ್ಕೆ ಹದಿನೆಂಟೂ, ಪೆನ್ಸಿಲಿಗೆ ನಾಲ್ಕು ಅಂತ. ಇಲ್ಲಿ ಎಲ್ಲಿಂದ ಕಳ್ಸಬೇಕು ಹೇಳ್ರಿ ? ಕಳ್ಸದೇ ಇದ್ದರೆ ನಡೆಯೋಹಾಂಗಿಲ್ಲ. ಕಳಿಸಲಿಕ್ಕೆ ಇಲ್ಲಿಲ್ಲ....ಆದ್ರಿಂದ ಇಂದ್ಯಾರಾರ ಹತ್ತರವಾದ್ರೂ ಸಾಲಾನಾದ್ರೂ ಮಾಡಿ ಕಳಸಲೇಬೇಕು.

ಗಿರಿಯಪ್ಪ—ಅದಕ್ಯಾಕೆ ನಿಮಗೆ ಚಿಂತೆ ? ಸಧ್ಯ ಆ ರೂಪಾಯ್ಯಿ ನಾನೇ ಕೊಡ್ತೇನೆ, ನಿಮಗೆ ಅನ್ಕೂಲ ಇದ್ದಾಗ ವಾಪ್ಸು ಮಾಡುವಿರಂತೆ. ನನ್ನಲ್ಲೂ ನಿಮಗೆ ಸಂಕೋಚವೇ ?

ಗೌಡ—ಸಂಕೋಚೇನು ಬಿಡಿ. ಆದ್ರೂ ನನಗೆ ಯಾರಾದರ ಹತ್ರ ಸಾಲಾ ಕೇಳೋದಂದರೆ ಪ್ರಾಣವೇ ಹೋದಂತಾಗತ್ತೆ. ಒಳ್ಳೇದು....ನಿಮ್ಮ ರಿಕಾರ್ಡೆಲ್ಲಾ ತೆಗ್ದು ಇಟ್ಟುಬಿಡ್ರಿ, ನಾನು ಬೇಗಷ್ಟು ಊಟಾ ತೀರ್ಸಿ ಕೊಂಡು ಬಂದುಬಿಡ್ತೇನೆ. (ಹೋಗುವನು)

ಗಿರಿಯಪ್ಪ—ಎಷ್ಟೇ ಪ್ರಯಾಸವಾಗಲೀ, ಎಷ್ಟೇ ಖರ್ಚಾಗಲೀ, ಈ ಸಂಕಪ್ಪನ ಸೊಕ್ಕನ್ನ ಮಾತ್ರ ಒಮ್ಮೆ ಮುರೀಲೇಬೇಕು. ಇಷ್ಟಕ್ಕೇ ಮುಗೀಲಿಲ್ಲ ಈ ಗಿರಿಯಪ್ಪನ ಆಟಾ....ಕಾಳೀನ ಮರುದಿನವೇ ಮನೆಯಿಂದ್ಲೂ ಹೊರಗೆ ಹಾಕ್ತೇನೆ. ಮನೇ ನನ್ನದೂ, ಆಮೇಲೆ ಹೊಲವೂ ನನ್ನದೇ, ನೀನು ಮತ್ತೆ ಬೀದಿಯಲ್ಲಿ ಅಳಿಯನ್ನ ಕಟ್ಟಿಕೊಂಡು ಬಿಕ್ಕೆ ಬೇಡಬೇಕು. ಗಂಗೆ ಎಲ್ಲಿಗೂ ಹೋಗೋದಿಲ್ಲ, ಆ ತಿರಕನ್ನ ಕಟ್ಟಿಕೊಂಡು ಕುಣೀಲಿಕ್ಕೆ ಅವಳೂ ನಿನ್ನಂತೇನು ಹುಚ್ಚಳಲ್ಲ. ಒಂದಲ್ಲ ಒಂದಿನ ಅವಳು ನನ್ನ ಕೈ ಸೇರಿಯೇ ಸೇರ್ತಾಳೆ....ಅಷ್ಟೇ ನನಗೆ ಬೇಕಾದ್ದು.

ರಾಗ_ಬಹಾರ್ ತ್ರಿತಾಲ

ಸ್ಮಿತಭಾಷಿಣಿ ಸುವಾಣೀ । ಅಹಿವೇಣಿ ಚಂಚಲಾಕ್ಷಿ
ಸುಶೀಲೆ ॥ ಧೃ ॥
ಪಿತನೆದೆ ಗರುವವ ಹರಿಸಿ ನೋದದೆ । ಸತಿಯು ಸ್ವಾಗತಿಸಿ
ಸುಖಿಪೆ ಪ್ರೇಮದೆ ॥ ೧ ॥

ಆಗಲೀ, ಈಗ ಮೊದಲು ಗೌಡರನ್ನಷ್ಟು ತುಮಕೂರಿಗೆ ಕಳುಹಿಸುವ ವ್ಯವಸ್ಥೆ ಮಾಡ್ತೇನೆ. (ಹೋಗುವನು)

[ ತೆರೆ ಮೇಲಕ್ಕೇರುವುದು ]

## ನೋಟ ೨

[ ಗಿರಿಯಪ್ಪನ ಮನೆಯಲ್ಲಿ ಸರ್ವಮಂಗಳೆಯ ಅಂತಃಪುರ ]

ಸರ್ವಮಂಗಳೆ—(ಮಗುವಿನ ಅಂಗಿಯನ್ನು ಹೊಲಿಯುತ್ತ ಕುಳಿತಿರುವಳು) ಹೆಂ.... ಈ ಅಂಗೀ ಮಾತ್ರ ಚನ್ನಾಗಿದೆ. ಒಳ್ಳೆಯ ಬಿಳಿಯ ಬಣ್ಣದ ಮಗುವಿಗೆ ಈ ಬಣ್ಣವೇ ಸೊಗಸು. (ಎಂದು ಅದನ್ನು ತೆಗೆದುಕೊಂಡು ಇದಿರಿನಲ್ಲೇ ಇದ್ದ ಕರ್ಪೂರದ ಬೊಂಬೆಗೆ ತೊಡಿಸಿ) ವ್ಹಾ! ವ್ಹಾ! ಎಷ್ಟು ಚನ್ನಾಗಿ ಒಪ್ಪುತ್ತದೆ ಈ ಬಟ್ಟೆ ಈ ಕಂದನಿಗೇ! (ಎತ್ತಿ ಆಡಿಸುತ್ತ) ಮಗೂ, ಈ ಬಟ್ಟೆಯು ನಿನಗಾದೀತೇನು ? ಆಂ-ಹೇಳು....ಇದೂ ಬೇಡವಂತೀಯಾ? ನಾಳೆ ಇನ್ನೊಂದು ಸ್ಯಾರ್ಟಿ ಅರಿವೆಯಲ್ಲಿ ಹೊಲಿದುಕೊಡುತ್ತೇನೆ. ಬೇಕಾದ್ರೆ ಅದರ ಮೇಲ್ತುಂಬಾ ಕಸೂತಿಯ ಕೆಲ್ಸವನ್ನೂ ಮಾಡುತ್ತೇನಪ್ಪಾ, ಆದೀತೇನು ? ಹಾಂ-ಅದೇ ಬೇಕಂತೀಯೇನು-ಕಳ್ಳಾ ! ಹಾಂ-ಆಗಲೀ, ಅದನ್ನೇ ಮಾಡಿಕೊಡ್ತೇನೆ. ನೋಡಪ್ಪಾ ನನ್ನ ಕಂದಾ- ಒಂದು ಮುತ್ತನ್ನು ಕೊಡು. (ಮೆಲುದನಿಯಿಂದ)

ರಾಗ-ಮಿಶ್ರಪಹಡಿ ತಾಳ-ಖವಾಲೀ

ಕೊಡೊಂದು ಚುಮ್ಮಾ - ಮುದ್ದಿನ ಉಮ್ಮಾ |
ಕೆಂದುಟಿ ಬಿಮ್ಮಾ - ಕಚ್ಚುತಲಮ್ಮಾ ||
ಹರಿಸೋ ನೀ ಬಾಳಾ - ಪರಿಪರಿ ತಾಪಾ |
ಸ್ವರ್ಗಸುಧೆಯನೆ ನೀಡುತ ಮುದದೇ ||

(ಮುದ್ದಿಟ್ಟು) ಅಹಹಾಹಾ ! ಎಷ್ಟು ಸವಿಯಾಗಿದೆಯಪ್ಪಾ ನಿನ್ನೀ ಮುತ್ತು ! ಹಾಂ....ಇನ್ನೊಂದು (ಮುದ್ದಿಸಿ) ಮತ್ತೊಂದು (ಮುದ್ದಿಸಿ) ಎಂಥಾ ಸ್ವರ್ಗಸುಖವಿದೆಯಪ್ಪಾ ನಿನ್ನೀ ಮುತ್ತಿನಲ್ಲಿ (ಮುತ್ತಿಡುತ್ತ) ....ಥೂ ಕಳ್ಳಾ....ಅಹಹಹಾ ! ನೀನು ಕಳ್ಳನಲ್ಲಪ್ಪಾ, ಆಚೀ ಮನೆ ಕಿಟ್ಟೊ ಕಳ್ಳಾ ! ಅಳಬೇಡ ..ನೀನು ನನ್ನ ರತ್ನ ! ನೋಡು, ನೀನು ಅತ್ರೆ ನನ್ನ ಕಣ್ಣಲ್ಲೂ ನೀರು ಬರ್ತದೆ ! (ಎದೆಗವುಚಿಕೊಂಡು ಕಣ್ಣೀರು ಸುರಿಸುವಳು.)

ಮುದ್ದಜ್ಜ—(ಪ್ರವೇಶಿಸಿ, ನೋಡಿ ನಗುತ್ತ, ಹಣೆ ಹಣೇ ಬಡಿದುಕೊಂಡು) ಏನ್ರವ್ವಾ' ಇದು ನಿಮ್ಮ ಹುಚ್ಚಾಟಾ ? (ಸರ್ವಮಂಗಳೆಯು ನಾಚಿ ಕಣ್ಣೊರಸಿಕೊಂಡು ಮಗುವನ್ನು ಮರೆಮಾಡುವಳು) ಚಿಕ್ಕ ಮಕ್ಕಳಂತೆ ಆ ಕರ್ಪೂರದ ಗೊಂಬೆಗೆ ಮುದ್ದಿಟ್ಟು ಅತ್ತರೆ ನಿಮ್ಗೇನು ಬಂದಹಾಗ್ಯಾತ್ರವ್ವಾ ! ಏನ್ರವ್ವಾ, ಮಕ್ಕಳಾಗಲಿಕ್ಕೆ ಮೊದಲೇ ಹೆಣ್ಣುಮಕ್ಕಿಗೆ ಅವುಗಳ ಮೇಲೆ ಪ್ರೇಮ ಹೆಚ್ಚೋ ಏನೋ....ಅಲ್ವೇನ್ರವ್ವಾ ? ಮಕ್ಕಳಾದ ನಂತರವೂ ಇದೇ ಪ್ರೇಮ ಇರತ್ತೇನ್ರವ್ವಾ ?

ಸರ್ವಮಂಗಳೆ—ಯಾಕಿರುವುದಿಲ್ಲ ಮುದ್ದಜ್ಜಾ....ತಮ್ಮ ಮಕ್ಕಳ ಮೇಲೆ ಪ್ರೇಮವಿಲ್ದ ಹೆಣ್ಣುಮಕ್ಕಳೂ ಈ ಜಗತ್ತಿನಲ್ಲಿದ್ದಾರೇನೋ ?

ಮುದ್ದಜ್ಜ—ಅಲ್ಲ ತಾಯೀ ! ಒಂದೊಮ್ಮೆ ಒಬ್ಬಳು ಮಾತಾಯ್ಗೆ ಎಂಟೋ ಹತ್ತೋ ಮಕ್ಕಳು ಒಮ್ಮೆಗೇ ಆದ್ರೆ ಆ ಪ್ರೇಮ ಎಲ್ಲಾ ಹೀಂಗೆ ಇದ್ದೀತೇನು ? ಬಹುತೇಕಾ ಅದು ಬರ್ತಾ ಬರ್ತಾ ಬೇಸಿಗೇ ಹಳ್ಳದ್ಹಾಂಗೆ ಬತ್ತೀ ಬತ್ತೀ ಕೊನೆಗೆ ಏನೂ ಇಲ್ದೇ ಹೋಗತ್ತೆಯೋ ಏನೋ ಅಂತ.

ಸರ್ವಮಂಗಳೆ—ಮುದ್ದಜ್ಜಾ ! ತಾಯೀಗೆ ಮಕ್ಕಳಲ್ಲಿ ಪ್ರೇಮ ಅವಿನಾಶವಾದ್ದಪ್ಪಾ. ಅದೆಂದಿಗೂ ಬತ್ತೋದಿಲ್ಲ. ನೋಡು, ನಾನು ಮಕ್ಕಳಿಗೇ ಎಷ್ಟೊಂದು ಉಡಿಗೆಯನ್ನು ಸಿದ್ಧಪಡ್ಸಿಟ್ಟಿದ್ದೇನೆ.

ಮುದ್ದಜ್ಜ— (ನಗುತ್ತ) ಒಂದೋ, ಎರಡೋ, ಮೂರೋ, ಹತ್ತೋ, ಇಪ್ಪತ್ತೋ ಅಬ್ಬಬ್ಬಬ್ಬಬ್ಬಾ ! ಅಂದ್ರೆ ಇಷ್ಟು ಮಕ್ಳಾಗಬೇಕಂತೀರೇನ್ರವ್ವಾ ನೀವು ನಿಮ್ಗೆ ? ಇದೇನು ಆಸೆಯಪ್ಪಾ ನಿಮ್ದು ! (ಆ ಕಡೇ ನೋಡಿ) ಅಗಾ— ನಿಮ್ಮಯ್ಯನೋರು ಬಂದ್ರಂತ ಕಾಣತ್ತೆ, ಬೂಟಿನ ಸಪ್ಪಳ ಕೇಳ್ತಾ ಇದೆ. ಅವ್ರ ಹತ್ರ ಏನಾದ್ರೂ ಮಾತಾಡೋದಿದ್ದರೆ ಮಾತಾಡಿ ಕಳ್ಸಿಬಿಡ್ರವ್ವಾ ಬೇಗ.

[ಸಂಗಯ್ಯನವರು ಪ್ರವೇಶಿಸುವರು. ಸರ್ವಮಂಗಳೆಯು ನಮಸ್ಕರಿಸುವಳು]

ಮುದ್ದಜ್ಜ— ಪಾದಕ್ಕೆ ಬಿದ್ದೀನ್ರೀ ಬುದ್ದಿ. (ಸಂಗಯ್ಯನವರು ಮುಖ ಓರೆಮಾಡಿ ಕುಳಿತುಕೊಳ್ಳುವರು.)

ಸರ್ವಮಂಗಳೆ—ಆ ಜಾತಕದ ನಕ್ಲು ಬೇಕಾಗಿತ್ತು—ತಂದಿದ್ದೀರೇನು ?

ಸಂಗಯ್ಯ—ಓಹೋ – ತಂದಿದ್ದೇನೆ ತಾಯೀ. ಅದನ್ನ ಸ್ವಲ್ಪ ಚೆನ್ನಾಗಿ ನೋಡಬೇಕೂ ಅಂತ ಸ್ವಲ್ಪ ವಿಳಂಬ ಮಾಡ್ದೆ ಅಷ್ಟೆ.

ಸರ್ವಮಂಗಳೆ—ಅಂತೂ ನೀವು ಬಹು ಪ್ರಯಾಸ ತಕ್ಕೊಂಡ ಹಾಗಾಯ್ತು ನನ್ನ ಬಗ್ಗೆ.

ಸಂಗಯ್ಯ—ನನ್ನ ಕೆಲ್ಸವೇ ಅದು. ಅಂದಮೇಲೆ ಪ್ರಯಾಸವೇನದರಲ್ಲಿ ? ಹಾಂ–ಮುದ್ದಪ್ಪಾ ! ಸಾಯಂಕಾಲ್ದ ಶಿವಾರ್ಚನೆಗೆ ಸ್ವಲ್ಪ ಹೂ ಪತ್ರೆ ಬೇಕಾಗಿತ್ತು. ಕೈ ಚೆನ್ನಾಗಿ ತೊಳ್ಕೊಂಡು ಸಾವ್ಕಾರ್ರ ತೋಟದಿಂದ ಸ್ವಲ್ಪ ಕೊಯ್ದು ತರ್ತೀಯೇನು ಬೇಗ ?

ಮುದ್ದಜ್ಜ—ಹಾಂ–ಆಗಲ್ರೀ ಬುದ್ದೀ. (ಹೋಗುವನು)

ಸಂಗಯ್ಯ—ತಾಯೀ, ಜಾತಕವನ್ನು ಚೆನ್ನಾಗಿಯೇ ನೋಡ್ದೆ. ಸಂತಾನಫಲ ಚೆನ್ನಾಗಿಯೇ ತೋರತ್ತೆ....ಅದ್ರಲ್ಲೇನೂ ತೊಂದರೆಯೇ ಇಲ್ಲ. ಆದರೆ....

ಸರ್ವಮಂಗಳೆ—ಆದೇನು ಹೇಳಿಬಿಡ್ರಿ-ಅದ್ಕೇನಾಗ್ಬೇಕು-ತೊಂದ್ರೆ ಏನಾಗಿದೆ ?

ಸಂಗಯ್ಯ—ತೊಂದರೆ ಏನೂ ಇಲ್ಲ. ನೋಡೀ ಸರ್ವಮಂಗಳಮ್ಮಾ, ಸಂತಾನ ಕಾರಕನಾದ ಶುಕ್ರ ನೀಚಸ್ಥಳದಲ್ಲಿರೋದ್ರಿಂದ .... ಆಂ....ಹೇಳ್ಳೇನು.... ಬೇಸರ ಆಗಬಾರ್ದು.

ಸರ್ವಮಂಗಳೆ—ಛೇ ! ಬೇಸರ ಯಾಕೆ .... ಹೇಳ್ರಿ-ಅದಕ್ಕೇನಾಗಬೇಕು ? ಏನಾದ್ರೂ ಅನ್ನಸಂತರ್ಪಣೆ-ಶಾಂತಿ-ಹೋಮ ಆಗಬೇಕಾಗಿದೆಯೇನು ? ಅನ್ರಿ-ಮಾಡೋಣ ಅದನ್ನ.

ಸಂಗಯ್ಯ—ಅದೇನೂ ಬೇಕಾಗಿಲ್ಲ .... ಅದಿಲ್ಲದೇ ಸಂತಾನ ಆಗತ್ತೆ. ಆದರೆ ಅಲ್ಲಿ ನಿಮ್ಮ ಯಜಮಾನ್ರದ್ದೇ ದೋಷಾ ಇದೇ ಅಂತ ತೋರ್‍ತಾ ಇದೆ ನೋಡಿ.

ಸರ್ವಮಂಗಳೆ—ಅಂದ್ರೆ ನನಗೆ ಅರ್ಥವೇ ಆಗಲಿಲ್ಲವಲ್ಲಾ ! ಯಜಮಾನರ ಆರೋಗ್ಯ ಚೆನ್ನಾಗಿಲ್ಲ ಅಂದ್ರಾ ? ಅವರೇನು ಔಷಧ ಗಿವುಷಧ ತಕ್ಕೋಬೇಕಂತೀರೇನು ನೀವು ?

ಸಂಗಯ್ಯ—ಅವರ ಆರೋಗ್ಯ ಚೆನ್ನಾಗಿಲ್ಲಾ ಅಂತ ಅನ್ನೋದಿಲ್ಲ ನಾನು .... ಆದರೂ ಅವರ ಭಾಗ್ಯದಲ್ಲಿ ಸಂತಾನ ಪಡೆಯೋ ಯೋಗ ಇಲ್ಲಾ ಅಂತ ಅನ್ನೋದು, ನೀವೇನೂ ಯೋಚಿಸಬೇಡ್ರಿ, ಮಕ್ಕಳಾಗತ್ತೆ.

ಸರ್ವಮಂಗಳೆ—(ಸ್ವ) ಏನು, ಹಾಗಾದರೆ ನಾನು ಸಂತತಿಗಾಗಿ ನನ್ನ ದೇಹ ವನ್ನ ಇನ್ನೊಬ್ರಿಗೆ ಮಾರಾಟ ಮಾಡಿಕೊಳ್ಳಬೇಕೇ .... ಸತೀತ್ವಕ್ಕೆ ....ಕಲಂಕವನ್ನು ಹಚ್ಚಬೇಕೇ ? ಅಂತಹ ಹೆಂಗಸರೂ ಜಗತ್ತಿನಲ್ಲಿ ದ್ದಾರೆಯೇ ? ಇರಲೊಲ್ಲರೇಕೆ ? ನನಗೆ ಅಂತಹ ಸಂತಾನ ಬೇಡ- ಮಕ್ಳು ಬೇಡ. (ಪ್ರ) ಏನು ಸ್ವಾಮಿಗಳೇ ! ಎಂತಹ ಕೀಳು ಮಟ್ಟಕ್ಕಿಳಿದುಬಿಟ್ಟಿರಿ ನೀವು ? ನೀವೂ ನರಕದಲ್ಲಿ ಹಾರಿಕೊಂಡ

ದ್ದಲ್ಲದೇ ನನ್ನನ್ನೂ ಅದೇ ಪಾಪಕ್ಕೆ ಎಳೀಬೆಕಂತ ಪ್ರಯತ್ನಿಸಿದ್ದೀರೇನು ನೀವು ? ಇದೇ ಏನು ನೀವು ಗುರುವಿನ ಸ್ಥಾನದಲ್ಲಿ ನಿಂತು ನಿಮ್ಮ ಭಕ್ತರಿಗೆ ಉಪದೇಶಿಸತಕ್ಕ ಮಾತು ? ನಿಮ್ಮಂಥವರು ಆ ಹಿರಿಯ ಸ್ಥಾನದಲ್ಲಿದ್ರೆ ಆ ಸಮಾಜ ಯಾವ ಅಧೋಗತಿಗೆ ಬೆಂದೀತೆಂಬುದನ್ನ ನೀವೇ ಯೋಚ್ನೆ. ನನಗೆ ಸಂತಾನದ ಫಲಾ ಇದೆ–ಯಜಮಾನ್ರಿಗಿಲ್ಲಾ, ಅಂತೂ ಮಕ್ಕಳಾಗ್ತಾವೆ ನೀವು ಯೋಚಿಸಬೇಡ್ರಿ! ಅಂದ್ರೆ ಅದ್ರ ಅರ್ಥ ಏನು ? ಈ ಪಾಪ್ದ ಮಾತಾಡ್ವಾಗ ನಿಮ್ಮ ನಾಲಿಗೆ ಅಲ್ಲೇ ಕಳಚಿ ಬೀಳಲಿಲ್ವೇಕೆ? ನಿಮ್ಮ ಶ್ವಾಸ ಅಲ್ಲಿಂದಲೇ ದೇಹ ಬಿಟ್ಟು ಹಾರಿಹೋಗಲಿಲ್ವೇಕೆ ? ಅಯ್ಯೋ ನಿಮ್ಮ ಗುರುಸ್ಥಾನವೆ !

ಸಂಗಯ್ಯ—ಮುಸಿಸಿಕೋಬ್ಯಾಡ್ರಿ ನೀವು; ನಿಮ್ಮಕ್ಕ ಆಶೆ ನೋಡಿ ನಾನಂದೆ. ಹಿಂದೆ ಪುರಾಣಗಳಲ್ಲೂ ಮಹಾ ಮಹಾರಾಜರುಗಳೂ ಕೂಡ ತಮ್ಗೆ ಸಂತತೀ ಇಲ್ಲದಾಗ ತಮ್ಮ ಗುರುವಿನಿಂದ – ಆಚಾರ್ಯಪುತ್ರರಿಂದ ಸಂತಾನ ಪಡ್ದ ಎಷ್ಟೋ ನಿದರ್ಶನಗಳೂ ತೋರತಾಯಿದೆ. ಅವಕ್ನೋಸ್ಕರವೇ ಅಂದೆ ನಾನು.

ಸರ್ವಮಂಗಳೆ — ಹಾಳಾಯ್ತು ನಿಮ್ಮ ಪುರಾಣ, ಸುಟ್ಟುಹೋದ್ರೂ ನಿಮ್ಮ ಗುರುಗಳು. ಈಗ ನಿಮ್ಮ ಆಶೆ ಏನದೆ ಅಂಬೂದು ಪೂರ್ಣ ಬಯಲಿಗೆ ಬಂತು! ನಿಮ್ಮ ಸ್ಥಾನದಲ್ಲಿ ಇನ್ನೊಬ್ಬರಿದ್ದಿದ್ದರೆ ಅವ್ರ ಎದೆ ಸೀಳಿ ರಕ್ತ ಕುಡಿತಿದ್ದೆ ನಾನು. ಆದ್ರೆ ನೀವು ನಮ್ಮ ಮನೆತನದ ಗುರುಗಳೂ ಅಂತ ಹೇಳಿಕೊಳ್ಳುತ್ತಾ ಇದ್ದೀರಿ. ಆದ್ದರಿಂದ–ಹೊರ್ಡಿ ಇಲ್ಲಿಂದ, ಮರ್ಯಾದೆ ಬೇಕೂ ಅಂತ ಅಂದ್ರೆ ಬೇಗ ತೊಲಗ್ರಿ ಆಚೆಗೆ.

ಪುಷ್ಪಜ್ಜ —(ಪ್ರವೇಶಿಸಿ) ಗುರುಗಳೇ, ಹೂ ಪತ್ರೆ ಕೊಯ್ದಿಟ್ಟಿದ್ದೆನೆ–ತರಲೇನು ಪೂಜೆಗೆ? ಆಗಲೇ ಪೂಜೆ ಆಗಿಹೋಯ್ತೇನೋ? ಹಾಂ–ಸಾಕು ತಾವಿನ್ನು ದಯಮಾಡಿಸ್ಬಹುದು ಇಲ್ಲಿಂದ. ನಾನು ಆಗಲೇ ಲೆಕ್ಕ ಹಾಕ್ಯೇಬಿಟ್ಟಿದ್ದೆ ನಿಮ್ಮ ಹಣೆ ಬರಹ. ನೋಡಿ–ಇಂದಿನಿಂದ ಈ ಮನೆಯೊಳಗೆ ಕಾಲಿಟ್ಟರೀ ಅಂದ್ರೆ ಪರಿಣಾಮ ಕೆಟ್ಟದ್ದಾದೀತು, ಜಾಗ್ರತೆ! ಹೊರಡಿರಿನ್ನ.

ಸಂಗಯ್ಯ—ತಾಯಿ ! ನೀವು ನನ್ನ ಮಾತಿನ ಅರ್ಥ ಮಾಡ್ಕೊಂಡಿಲ್ಲಾ. ಮುಖ್ಯ ಇದು ನನ್ನ ಗ್ರಹಚಾರ. ಬಹುಶಃ ನಾನಿಂದು ಹೊರ್ಟ ಮುಹೂರ್ತವೇ ಚನ್ನಾಗಿರಲಿಕ್ಕಿಲ್ಲಾ

ಮುದ್ದಜ್ಜ—ಹಾಂ-ಅದ್ಕೇ ಮರ್ಯಾದೆ ಪ್ರಾಣ ಎರಡೂ ಉಳೀತು. ಇನ್ನ ಜೇಡ ನಿಮ್ಮ ಪಂಚಾಂಗ ಇಲ್ಲೀ. ಮತ್ತೆ ನಾನು ಅವ್ನೋರನ್ನ ಅಪ್ನೋರನ್ನ ಯಾರನ್ನೂ ನೋಡಾಕಿಲ್ಲ ನೋಡಿ.

ಸರ್ವಮಂಗಳೆ— ಮುದ್ದಜ್ಜಾ - ಏನೂ ಹೇಳಬೇಡವಪ್ಪಾ ಅವರೀಗೆ, ಅವರು ಹೋಗಲೀ. ಆಚೆ ಉಗ್ರಾಣದಿಂದ ನಾಲ್ಕು ಸೇರು ಅಕ್ಕಿ, ಎರ್ಡು ತೆಂಗಿನ ಕಾಯಿ, ಮತ್ತೊಂದೆಂಟಾಣೆ ರೊಕ್ಕಾ ಸಹ ಅವ್ರ ಮನೇಗೆ ತಲ್ಪಿಸಿ ಬಂದುಬಿಡು. ಮುಂದವರು ಇಲ್ಲಿಗೆ ಬರೋದ್ಬೇಡ.

ಮುದ್ದಜ್ಜ—ಇದೇನ್ರವ್ವಾ-ನಿಮ್ಮನಸ್ಸೂ....ಆಗಲೀ ಕೊಟ್ಟು ಬರ್ತೀನವ್ವಾ !

ಸಂಗಯ್ಯ—ಹಾಗಾದ್ರೆ ಬರ್ತೇನೆ ನಾನು. (ಹೋಗುವನು)

ಮುದ್ದಜ್ಜ—ಅವ್ವಾ! ನಾನು ಎಂದ್ನಿಂದ ಹೇಳ್ತಿರೋದು ಈಗ ನಿಮ್ಮ ಅನುಭವಕ್ಕೆ ಬಂತೇನು ? ನಿಜವಾಗಿಯೂ ಇಂತಹ ಠಕ್ಕರನ್ನ ನಂಬಲೇಬಾರದವ್ವಾ !

ಸರ್ವಮಂಗಳೆ—ಮುದ್ದಜ್ಜಾ ! ನಮ್ಮ ಬುದ್ಧಿ ನಮ್ಮ ಸ್ವಾದೀನದಲ್ಲೇ ಇದ್ರೆ ಯಾರು ಏನೂ ಮಾಡಲಾರರಪ್ಪಾ. ಇಂದಿನಿಂದಂತೂ ನನ್ನೀ ಹುಚ್ಚು ತೊಲಗಿತು. ಮನೆ ಮಾರು ದೇವರಿಟ್ಟಂತಾಗ್ಲಿ, ಅದಕ್ಯಾಕೆ ಅಳಬೇಕು ನಾನು ?

ಮುದ್ದಜ್ಜ—ತಾಯಿ- ನೀವು ವ್ಯರ್ಥ ದುಃಖಿಸಬ್ಯಾಡ್ರಿ. ಈ ಎಲ್ಲಾ ನಿಮ್ಮ ಆಶ್ರಿತ ರೈತ್ರ ಮಕ್ಳೂ ನಿಮ್ಮಕ್ಕೇ ಅವ್ವಾ, ಇವರನ್ನೇ ನಿಮ್ಮಕ್ಕಂತ ತಿಳೀರಿ ತಾಯಿ ನಾನು ನಿಮ್ಮೊಬ್ಬ ಆಶ್ರಿತ - ನಿಮ್ಮೊಬ್ಬ ಮಗನೇ ಅಲ್ಲವೇನವ್ವಾ ? ಈ ಇಷ್ಟೊಂದು ಜನ ಮಕ್ಳನ್ನ ಬಿಟ್ಟೂ ಆ ಕಣ್ಣೀಗೆ ಕಾಣ್ದ ಬೇರೆ ಮಕ್ಕಳನ್ನ ಕಟ್ಟಿಕೊಂಡು ನೀವ್ಯಾಕೆ ಹಲಬತಾ ಕುಂತಿರತೀರಿ ?

ಅಪ್ಪಾ ತಮ್ಮ ಪಾಪ–ನನ್ನ ಧಣಿ ಆ ಚನ್ನಬಸಪ್ಪನೋರು ಸಾಯ್ವಾಗ ನಿಮ್ಮ ಯಜಮಾನ್ರೀಗೆ ಅಂದದ್ದು ನಿಮ್ಮ ನೆಪ್ಪಾಗೈತೇನು ? ಮಗಾ-- ನಿನ್ನ ಒಕ್ಲಮಕ್ಳನ್ನ ಚೆನ್ನಾಗಿ ನೋಡ್ಕೋ, ಅವ್ರೇ ನಿನ್ನ ಮಕ್ಳು ಅಂತ ಅಂದ್ರಲ್ವೇನವ್ವಾ ? ಹೌದು ತಾಯಿ ಅವ್ರೆಲ್ಲ ನಿಮ್ಮಕ್ಳೇ. ಆದ್ರೆ ಅದ್ರಂತೆ ನಿಮ್ಮ ಯಜಮಾನ್ರು ಮಾತ್ರ ರೈತ್ರನ್ನ ಸರಿಯಾಗಿ ನೊಡ್ತಾ ಇಲ್ಲಾ. ಆ ಗೋಳೇ ಈ ಎಲ್ಲಾ ಅನಿಷ್ಟಕ್ಕೂ ಕಾರ್ಣಾ ತಾಯಿ.

ಸರ್ವಮಂಗಳೆ— ಹೌದು ಮುದ್ದಜ್ಜಾ ! ಇದು ನೀನಂದ ಮಾತಲ್ಲಾ. ಕೈಲಾಸದಲ್ಲಿದ್ದ ನಮ್ಮಾವನವ್ರೇ ನಿನ್ನೊಳಗಿದ್ದು ಈ ರೀತಿ ನುಡ್ಸತಾ ಇದ್ದಾರಜ್ಜಾ. ಅಜ್ಜಾ, ನಾನಿನ್ನು ಹಾಗೇ ಮಾಡ್ತೇನೆ. ನನ್ನಿಂದ ಸಾಧ್ಯವಾದಷ್ಟೂ ಆ ರೈತಾಪಿ ಜನ್ರ ಹಿತ್ದ ಬಗ್ಯೆ ದುಡೀತೇನೆ.

ಮುದ್ದಜ್ಜ—ಹಾಂಗಾದ್ರೆ ದೇವ್ರು ನಡ್ಸತಾನೆ ನನ್ನವ್ವಾ ! ಈ ಮನೆ – ನಾನು ಉಂಡು ತಿಂದು ಬೆಳ್ದ ಈ ಹಿರಿಯರ ಮನೇ ಎಂದೆಂದೂ ಹಾಳಾಗ್ದೇ ಸುಖವಾಗಿರತ್ತವ್ವಾ.

ಸರ್ವಮಂಗಳೆ—ಅಜ್ಜಾ ! ಒಂದೇ ನಿಮಿಷದಲ್ಲಾದ ನನ್ನ ಮನಸ್ಸಿನ ಪರಿವರ್ತನೆಯನ್ನ ನಿನಗೇನಂತ ಹೇಳ್ಲಿ ನಾನು, ನನ್ನ ಹೃದಯದಲ್ಲಿದ್ದ ಆ ದುಃಖ ಆ ಒಡಲುರಿ ಎಲ್ಲೂ ಎಲ್ಲೋ ಮಾಯವಾಗಿಬಿಟ್ಟಿತು. ವರ್ಣಿಸಲಸಾಧ್ಯವಾದ ಒಂದು ಆನಂದ–ಉಲ್ಲಾಸ--ಇದೀಗ ನನ್ನ ಹೃದಯದಲ್ಲಿ ಮನೆ ಮಾಡಿಕೊಂಡಿದೆ, ಮುದ್ದಜ್ಜಾ ! ಹೌದು ನಾನು ನಿಜವಾಗಿಯೂ ಬಂಜೆಯಲ್ಲ; ನನ್ನ ಹೊಟ್ಟೆಯಲ್ಲಿ ಒಂದೆರಡೇ ಅಲ್ಲ, ನಾಲ್ಕು–ಎಂಟು–ಹತ್ತೂ ಅಲ್ಲ, ನೂರಾರು ಮಕ್ಕಳು ಹುಟ್ಟಿದ್ದಾರಪ್ಪಾ ! ಈ ಮಕ್ಕಳ ಸುಖದಲ್ಲಿ ನಾನೆಲ್ಲೋ ಒಂದೋ ಎರಡೋ ಮಕ್ಕಳನ್ನ ಆಶಿಸಪಟ್ಟು ಹೃದಯವನ್ನ ಎಷ್ಟು ಸಂಕುಚಿತ ಮಾಡಿದ್ದೆನಲ್ಲಜ್ಜಾ ! ಅದೊಂದು ಸ್ವಾರ್ಥದ ಕಿರುಮನೆಯಾಗಿತ್ತಲ್ಲಜ್ಜಾ ! ಇಲ್ಲ....ನಾನಿಂದಿನಿಂದ ಹೃದಯವನ್ನ ವಿಶಾಲಗೊಳಿಸಿ ಸೇವೆಯ ಮಂಗಲಗೀತೆಯನ್ನ ಹಾಡ್ತೇನೆ. ಪರಮೇಶ್ವರ ನನ್ನ ಸೇವೆಗೆ ಅವಕಾಶ ಒದಗಿಸಿಕೊಡಲಿ ....

ರಾಗ_ಮಿಶ್ರಖಮಾಚ್_ದಾದರಾ

ಬೆಳಕ ನೀಡೋ ನೀ ದೇವಾ–ಸೇವಾನಂದಪಥದೆ ನಡೆಸೋ || ಪ ||

ನೀಳ ಶುದ್ಧ ಹೃದಯಾಂಬರದೆ– ಸ್ವಾರ್ಥ ಮೋಡ ಸೇರೀ–
ಬಾಳ ನೌಕೆ ದುರಿತ ಜಲಧಿ ತಳವನಪ್ಪದಂತೇ || ೧ ||

[ ತೆರೆ ಬೀಳುವುದು ]

## ನೋಟ ೪

[ ಶಿವಗ್ರಾಮದ ಒಂದು ಬೀದಿ. ಗಂಗವ್ವನು ಕೊಡ ತೆಗೆದುಕೊಂಡು ಸಾಗಿರುವಳು. ]

ಗಂಗವ್ವ—ಈ ವರ್ಷದ ನಮ್ಮ ಬಲಾಚಾರ ಚೆನ್ನಾಗಿರೋ ಹಾಂಗೆ ಕಾಣತ್ತೆ. ಹೊಲ್ದಲ್ಲೂ ಪೈರು ಚೆನ್ನಾಗಿದೆ; ಹಾಕಿದ ತರಕಾರಿ, ಸೊಪ್ಪುಗಳೂ ಚೆನ್ನಾಗಿ ಬೆಳ್ದಿದ್ದಾವೆ. ಹೀಗೆ ಇನ್ನೂ ಮೂರು ನಾಲ್ಕು ವರ್ಷ ಶಿವ ನಡ್ಸಿದ್ರೆ ಸಾವಕಾರ್‍ರ ಸಾಲಾನೂ ತೀರ್‍ಬಹುದು, ನಮ್ಮ ಸಂಸಾರಾನೂ ಸುಖವಾಗಿ ನಡೀಬಹುದು. ಈಗಿನ ಈ ಮನೇ ಅಡ್ವು, ಹೊಲಾ ಅಡ್ವು, ದೇಹಾ ಅಡ್ವು....ಈ ಬಾಳು ನನಗಂತೂ ಮುಳ್ಳಿನ ಹಾಸಿಗೆಯಾಗಿ ಕೂತದೆ. ಇನ್ನುವ್ಯಾಲೆ ನಾವು ಅಪ್ಪನೀಗೆ ದುಡಿಯೋಕ ಹಚ್ಚಬಾರ್‍ದು; ಪಾಪ, ದುಡದೂ ದುಡದೂ ಹಣ್ಣಾಗಿಬಿಟ್ಟ. ಅವನನ್ನ ಮನೇಲೇ ಸುಖವಾಗಿ ಕೂಡ್ಸಿ ನಾವೇ ದುಡ್ದು ಅವನ ಸೇವೆ ಮಾಡ್ಬೇಕು. ಮುಖ್ಯ ಎಲ್ಲದಕ್ಕೂ ಭಗವಂತ ನಡಸಬೇಕು. (ಹೊರಡುವಳು)

ಲಿಂಗಪ್ಪ—(ಪ್ರವೇಶಿಸಿ) ಏನು ಗಂಗವ್ವಾ ! ಈ ಬೆಳಗಾ ಮುಂದೇ ಕೊಡಾ ಅವುಚಿಕೊಂಡು ಹೊರ್‍ಟೆಯಲ್ಲಾ....ಎಲ್ಲೀಗೆ ?

ಗಂಗವ್ವ—ಹಳ್ಳದ ವ್ಯಾಲೀನ ನಮ್ಮ ಹೊಲಕ್ಕೆ. ಅಲ್ಲೇ ದಡದಲ್ಲಿ ಅಷ್ಟು ತರಕಾರಿ, ಸೊಪ್ಪು, ಮೆಣ್ಸ ಹಾಕಿದ್ದೀವಿ. ಅದಕ್ಕಷ್ಟ ನೀರು ಹಾಕಿ ಬರ್‍ತೀನಣ್ಣಾ.

ಲಿಂಗಪ್ಪ—ಇದೇನಿಂದು ನೀನೇ ಹೊರ್ಟೆಯಲ್ಲಾ ! ಮುದ್ಕಾ ಇಲ್ಲೇನು ಇಂದು ಮನೆಯಲ್ಲಿ ? ಚನ್ನಾ ಆದ್ರೂ ಹೋಗ್ಬಾರದಿತ್ತೇ ?

ಗಂಗವ್ವ—ಮುದ್ಕಾ ಇನ್ನೆಷ್ಟು ದಿನ ದುಡ್ದು ನಮ್ಮ ಹೊಟ್ಟೇ ತುಂಬ್ಸಬೇಕಣ್ಣ? ನಾವೂ ಕೆಲ್ಸ ಮಾಡಬಾರ್ದೇ ? ಅದೂ ಅಲ್ದೆ ಅವರಿಬ್ರೂ ಕಣ್ದಿ ಕೆಲ್ಸಕ್ಕೆ ತೊಡಗಿದ್ದಾರೆ. ಈಗ, ಒಂದು ನಿಮಿಷವೂ ಬಿಡೂ ಇಲ್ಲ ಅವರಿಗೆ.

ಲಿಂಗಪ್ಪ—ಯೇನು ! ನಿಮ್ಮ ಕಾಳು ತುಳ್ಸಲಿಕ್ಕೆ ಪ್ರಾರಂಭ ಆಯ್ತೇನು ಹಾಗಾದರೆ ? ಎಷ್ಟು ದಿವ್ಸಾ ಆಯ್ತು ಶುರೂ ಮಾಡಿ ?

ಗಂಗವ್ವ—ಆಯ್ತಣ್ಣಾ ಆಗಲೇ ಏಳೆಂಟು ದಿನಾ, ನಾಳೆ ನಾಡಿದ್ದು ರಾಶೀ ಪೂಜೆಯೂ ಆಗತ್ತೆ. ಬೇಗಷ್ಟು ಕೊಡೋದನ್ನ ಕೊಟ್ಟು ಉಳದದ್ದನ್ನ ಮಾರಾಟ ಮಾಡಿ ಸಾವಕಾರ್ರ ಸಾಲಾ ಒಂದು ಬಗೆಹರ್ಸಿಕೊಂಡುಬಿಡ ಬೇಕೂ ಅಂತ ಒದ್ದಾಡ್ತಿದ್ದಾರೆ ಅಪ್ಪ !

ಲಿಂಗಪ್ಪ—ಅದೂ ಸರಿಯೇ. ಸಾವ್ಕಾರ್ರ ಸಾಲಾ ಹೆಚ್ಚು ದಿನ ಇಟ್ಕೊಳ್ಳೋದೇನೂ ಒಳ್ಳೇದಲ್ಲ.

ಗಂಗವ್ವ—ಬರ್ತೇನಣ್ಣಾ .... ಆಗಲೇ ಹೊತ್ತಾಗೋಯ್ತು. ಬೇಗಷ್ಟು ನೀರು ಹಾಕಿ ಬಂದು ಇನ್ನು ಅಡ್ಗೀ ಕೆಲ್ಸಕ್ಕೆ ಕೈಹಚ್ಚಬೇಕು. ಪಾಪ, ಎಷ್ಟು ಹಸಕೋತಾರೋ ! (ಹೋಗುವಳು)

ಲಿಂಗಪ್ಪ—ಹೋಗು ಹೋಗವ್ವಾ. ನಾನೂ ಹೋಗ್ತೇನೆ ಹೊಲದ ಕಡೇಗೆ, ನಮ್ಮ ಪೈರಿನ್ನೂ ಕಣ್ಣೇ ಕಂಡಿಲ್ಲ....ಕೊಯ್ದದ್ದ ಹಾಂಗೇ ಬಿದ್ದಿದ್ದಾವೆ ಹೊಲದಲ್ಲೇ. (ಹೊರಡುವನು)

ಗಿರಿಯಪ್ಪ—(ಪ್ರವೇಶಿಸಿ) ಲಿಂಗಪ್ಪಾ ! ಅದ್ಯಾರೋ ಹೋದದ್ದಲ್ಲೀ, ಕೊಡಾ ತಕ್ಕೊಂಡು ?

ಲಿಂಗಪ್ಪ—ನಮ್ಮ ಗಂಗವ್ವ ಅಲ್ವೇನು ಸಾವ್ಕಾರ್ರೇ - ಸಂಕಪ್ಪನ ಮಗ್ಳು .... ಸೊಪ್ಪಿನ ಮಡೀಗೆ ನೀರು ಹಾಕಲಿಕ್ಕೆ ಹೋಗ್ತಾ ಇದ್ದಾಳೆ.

ಗಿರಿಯಪ್ಪ—ಎಲ್ರೂ ದುಡಿಯೋರೇ ಸಂಕಪ್ನ ಮನೇಲೀ! ಮಾವನಿಗಿಂತ ಅಳಿಯ ಹೆಚ್ಚು....ಅಳಿಯನಿಗಿಂತ ಮಗಳು ಹೆಚ್ಚು. ಏನು ದುಡೀ ತಾರೋ ಮೈ ಹಣ್ಮಾಡಕೊಂಡು, ನಾನಂತೂ ಕಾಣೆ.

ಲಿಂಗಪ್ಪ—ಹೌದು ಸಾಹುಕಾರ್ರೇ .... ದುಡೀದೇ ಇದ್ರೆ ಹೊಟ್ಟೆ ಹ್ಯಾಂಗ್ ತುಂಬೇಕ್ ಹೇಳ್ರೀ ? ಕುಂತು ಉಣ್ಣೋಕೆ ಅವರ ಹಿರಿಯರು ಮಾಡಿ ಟ್ಟಿದ್ದು ಅಷ್ಟರಲ್ಲೇ ಇದೆ. ಇದೇನು .... ತಾವೂ ಇಂದು ಇಷ್ಟು ಬೆಳ್ಳ ಬೆಳಗೇ ಹೊರ್ಟ್ಬಿಟ್ಟಿರಲ್ಲಾ ! ಎಲ್ಲೀಗೆ—ಹೊಲಕ್ಕೇನು ?

ಗಿರಿಯಪ್ಪ—ಅಲ್ಲಿ ಹೊಲದಲ್ಲಿ ನಂದೇನದೆ ? ಇಲ್ಲೇ ಹಳ್ಳದ ಹತ್ರ ಸ್ವಲ್ಪ ಕೆಲ್ಸಾ ಇತ್ತು–ಅದ್ಕೇ ಹೊರಟೆ....ಬರ್‍ತೇನೆ. (ಹೋಗುವನು)

ಲಿಂಗಪ್ಪ—ಆಗಲಿ ಸಾವ್ಕಾರ್ರೇ–ನಮಸ್ಕಾರ. (ಹೋದ ನಂತರ) ಇದೇನು ? ಈ ಸಾವ್ಕಾರ ಇಂದು ಬೆಳಗಾ ಮುಂದೇ ಛಳೀಲಿ ಹೊರಟ ಕಾರ್‍ಣಾ ಏನು ? ಹವಾ ಗಿವಾ ತಿನ್ನೋಕೇನು ? ಹೂಂ–ಇದ್ರೂ ಇರ್‍ಬಹ್ದು. ಹೋಗ್ಲಿ, ಸಾವ್ಕಾರ್‍ರ್ರು ಅಲ್ಲೇನು ? (ಹೋಗುವನು)

[ತೆರೆ ಮೇಲಕ್ಕೇರುವುದು]

## ನೋಟ ೫

[ ಹಳ್ಳದ ಮೇಲಿನ ತರಕಾರೀ ಹೊಲ, ಗಂಗವ್ವನು ನೀರೆರೆಯುತ್ತಿರುವಳು ]

ಗಂಗವ್ವ—ಹೊತ್ತಾಗ್ಲೇ ಮೇಲೇರ್‍ತು. ಇನ್ನೂ ಈ ನೀರಿನ ಕೆಲ್ಸ ಮುಗಿದೇ ಇಲ್ಲ. ಈ ಕೆಲ್ಸಾ ಎಷ್ಟು ಕಷ್ಟ ಅನ್ನೋದು ಈಗೀಗ ನನಗೆ ಗೊತ್ತಾಯ್ತು. ಪಾಪ, ಈವರೆಗೂ ಅವರೇ ಮಾವ ಅಳಿಯಂದಿರು ದುಡೀತಾ ಇದ್ರು – ನಾನು ಮನೆಯಲ್ಲೇ ಮನೇ ಕೆಲ್ಸಾ ನೋಡ್ಕೋತಿದ್ದೆ. ನನಗೆ ಇದೇನು ಮಹಾ ನೀರಿನ ಕೆಲ್ಸಾ ಅಂತ ತೋರ್‍ತಾ ಇತ್ತು. ಕಷ್ಟ ಅನುಭವಿಸಿ

ದಲ್ಲದೇ ಗೊತ್ತಾಗದು. ಗಂಡಸ್ರು ಸಂಸಾರದ ಮಾನ ಪ್ರಾಣ ಉಳಸ ಲಿಕ್ಕೆ ಎಷ್ಟು ಹೆಣ್ಗತಾರೆ-ಎಷ್ಟು ಬೆವ್ರು ಸುರಸ್ತಾರೆ, ಇನ್ನೆಷ್ಟು ದಮ್ಮು ಹಾಳ್ಮಾಡ್ಕೋತಾರೆ ಅನ್ನೋದು ಮನೆಯಲ್ಲೇ ಕೂತುಣ್ಣುವ ಹೆಂಗಸರಿ ಗೇನು ಗೊತ್ತಾಗಬೇಕು ? ಹೆಂಗ್ಸು ದುಡಿಯೋದ್ಬೇಡ--ದುಡ್ದು ಬಂದ ಗಂಡಸಿನಲ್ಲಷ್ಟು ತನ್ನ ಅಂತಃಕರಣದ ಸಹಾನುಭೂತಿಯನ್ನು ತೋರಿ ಸಿದ್ರೂ ಆ ಸಂಸಾರ ಪ್ರೇಮದ ಹೊನ್ನು ಕರ್ದೀತು.

## ಭಾವಗೀತೆ

ಬಿಸಿಲು ಮಳೆ ಗಾಳಿಯುಲಿ - ದುಡಿದು ಬೇಸರಿಕೆಯುಲೀ |
ಹಸಿದು ಬಂದಿಹ ಪತಿಗೆ - ಸತಿಯುಳಾ ಮೃದುವಚನ ಸಗ್ಗದೂಟಾ ||
ಬಸವಳಿದು ಬಾಯಾರಿ - ಶ್ರಮಿಸಿ ತಾ ಮನೆಗೆ ಬರೆ |
ಶಶಿಮುಖಿಯ ಪ್ರೇಮನುಡಿ ಅದುವೆ ಕೈಲಾಸಾ ||

[ಹಳ್ಳದಲ್ಲಿ ನೀರು ತುಂಬುತ್ತಲಿರುವಳು.]

ಗಿರಿಯಪ್ಪ—(ತೆರೆಯಲ್ಲಿ) ಯಾರೇ ಅಲ್ಲಿ ಆದೂ ಹಳ್ಳದಲ್ಲೀ ? ಹಳ್ಳದಲ್ಲಿ ನೀರು ಚೆನ್ನಾಗುಂಟೇನು ?

ಗಂಗವ್ವ—(ಸುತ್ತಲೂ ನೋಡಿ) ಯಾರದು ಕೂಗಿದ್ದು ? (ಯಾರೂ ಕಾಣದಿರಲು) ನನಗಲ್ಲಾ ಅಂತ ಕಾಣತ್ತೆ. ಬೇರೆ ಯಾರಿಗೋ ಇರಬೇಕು.

ಗಿರಿಯಪ್ಪ—ಏ ! ಏ ! ಗಂಗೀ – ಕಿವೀ ಕೇಳ್ಸೋದಿಲ್ಲೇನು ? ಹಳ್ಳದಲ್ಲಿ ನೀರು ಹ್ಯಾಗದೆ....ಚೆನ್ನಾಗಿದ್ಯೇ ?

ಗಂಗವ್ವ—(ಸ್ವ) ಅವನ್ಯಾವನೂ – ಜಂಬದ ಕೋಳಿ ಎಲ್ಲಿ ? ನನಗ ಗಂಗೀ ಅಂತ ಕರೀತಾನಲ್ಲ ! ನಾನೇನು ಇವ್ನ ಮದ್ವೆಯಾದ ಹೆಂಡತಿಯೇ ? ಅಥವಾ ಮನೇ ಕೆಲ್ಸಕ್ಕೆ ನಿಂತ ಗೌಂಡಿಯೇ ? ಬರ್ಲ್ಲಾನೆ ಬೇಕಾದ್ರೆ.... ನೋಡ್ಕೊಂಡು ಹೋಗ್ತಾನೆ. ಇಷ್ಟು ದೂರಾ ಬಂದವ್ನೀಗೆ ಇಲ್ಲೀವರೇಗೆ ಬಂದು ನೋಡ್ಕೊಂಡು ಹೋಗಾಕ ಬರೋದಿಲ್ಲೇನು ?

ಗಿರಿಯಪ್ಪ—ಏ ಗಂಗವ್ವಾ! ಇಷ್ಟು ಮಿಜಾಯ್ಸಿಗೆ ಏನು ನಿನಗೆ? ಕೇಳಿದ್ದ ಕ್ಕಷ್ಟು ಉತ್ರಾ ಕೊಡೋಕೆ ಬರೋದಿಲ್ಲೇನು?

ಗಂಗವ್ವ—(ಸ್ವ) ಹೂಂ-ಮಿಜಾಯ್ಸಿಗೆ! ಕೇಳಿದ್ದಕ್ಕೆಲ್ಲಾ ಉತ್ರಾ ಕೊಡಲಿಕ್ಕೆ ಯಾರೂ ನನ್ನನ್ನ ಕೂಲೀಗಿಟ್ಟುಕೊಂಡದ್ದಷ್ಟರಲ್ಲೇ ಇದೆ. ಯಾವ ಮಾರಾಯ್ನ ಸ್ಥಳದಲ್ಲೂ ನಾವು ಮನೇ ಮಾಡ್ಕೊಂಡು ಬಾಳ್ವೆ ಮಾಡ್ತಾ ಇಲ್ಲ.

ಗಿರಿಯಪ್ಪ—ನೀರಿದೇನು ಗಂಗವ್ವಾ-ಹಳ್ಳದಲ್ಲೀ?

ಗಂಗವ್ವ—(ಸ್ವ) ಹಾಂ-ಹಾಂಗ ಹಾದೀಗ ಬಾ....ನಾನೂ ಉತ್ರಾ ಹೇಳ್ತೀನೆ. (ಪ್ರ) ನೀರಿದೆ, ಆದರೆ ಅಷ್ಟು ಚೆನ್ನಾಗಿಲ್ಲಾ. ಅಲ್ಲೇ ಸ್ವಲ್ಪ ಮೇಲಕ್ಕೆ ಹೋದರೆ ನೀರು ಚೆನ್ನಾಗಿ ಹರಿಯುತ್ತೆ.

ಗಿರಿಯಪ್ಪ—(ಪ್ರವೇಶಿಸಿ) ಅಲ್ಲಿ ಅಲ್ಲಾ ನಾನ್ಕೇಳಿದ್ದೂ - ಇಲ್ಲಿ! ನೀರೇನಾಗದೆ ಇಲ್ಲೀ?

ಗಂಗವ್ವ—(ನೋಡಿ) ಓಹೋ ಸಾವ್ಕಾರ್ರೇನು! (ಭಯ ಮತ್ತು ವಿನಯದಿಂದ) ಇಲ್ಲ ಸಾವ್ಕಾರ್ರೇ, ತಮ್ಮ ಸ್ವರದ ಗುರುತು ಹತ್ಲೇ ಇಲ್ಲ ನನ್ಗೆ. ನೋಡಿ, ನೀರು ಚೆನ್ನಾಗಿಲ್ಲ. (ಕೊಡ ತೆಗೆದುಕೊಂಡು ದೂರ ಸರಿಯುವಳು)

ಗಿರಿಯಪ್ಪ—ಏನು ಗಂಗವ್ವಾ! ಮಡೀಗೆ ನಿತ್ಯಾ ನೀರು ನೀನೇ ಹಾಕ್ಬೇಕೇನು? ಏನು ಕಷ್ಟಪಡ್ತಸತಾರಪ್ಪಾ ನಿಮ್ಮ ಗಂಡಸ್ರು ನಿನಗೆ ಮನೇಲಿ!

ಗಂಗವ್ವ—ಇದೇನು ಕಷ್ಟ ಸಾವ್ಕಾರ್ರೇ! ಕೆಲ್ಸಾ ಮಾಡ್ದಿದ್ರೆ ಹೊಟ್ಟೆ ತುಂಬತ್ತೆಯೇ? ರೈತ್ರ ಮನೇಲಿ ಯಾರೂ ಕೂತು ಉಣ್ಣೋರಿಲ್ಲಾ, ಎಲ್ರೂ ಕೆಲ್ಸ ಮಾಡುವವರೇ!

ಗಿರಿಯಪ್ಪ—ಕೆಲ್ಸ ಮಾಡ್ತಾರೆ ಸರಿ. ಆದರೆ ಸುಖವಾಗಿ ಕೂತು ತಿನ್ನಲಿಕ್ಕಿದ್ದೂ ಹೀಗ್ಯಾಕೆ ಮೈ ದಣಿಸಕೋಬೇಕೂ ಅಂತ ನನ್ನ ಪ್ರಶ್ನೆ. ನೋಡು-ನೀನು ಎಲ್ಲಾ ಹೆಣ್ಣುಮಕ್ಕಳಂತಲ್ಲ.... ಬಹು ಕೋಮಲ

ಶರೀರ ನಿನ್ನದೂ ! ಆಗಲೇ ನಾಲ್ಕು ಕೊಡ ನೀರು ಎತ್ತಿ ಹೊಯ್ದು ದ್ದಕ್ಕೆ ನಿನ್ನ ಮೈಯೆಲ್ಲಾ ಬೆವತುಹೋಗಿದೆ ನೋಡು !

ಗಂಗವ್ವ—ಬೆವ್ರು ಸುರ್ಸಿದ್ರೇ ಊಟ ರುಚಿ ನಮ್ಗೆ. ಕಷ್ಟಪಟ್ಟು ಕೆಲ್ಸಾ ಮಾಡಿದ್ರೆ ಸುಖವಾಗಿ ನಿದ್ದೆ ಬರತ್ತೆ – ಇಲ್ಲವಾದ್ರೆ ಈ ನಮ್ಮ ಚಿಂತ್ಯೇಲಿ ನಿದ್ದೆಯಾದ್ರೂ ಹತ್ತೀತೇನು ಸಾವ್ಕಾರ್ರೇ ?

ಗಿರಿಯಪ್ಪ—ಈ ಚಿಂತೆ ಎಲ್ಲಾ ನೀವು ಬೇಕೂ ಬೇಕೂ ಅಂತ ತಂದ್ಕೊಳ್ಳೋದು ಗಂಗವ್ವಾ ! ಅನುಭವಿಸಲಿಕ್ಕೆ ಸುಖಾ ಇರ್ತಾ ಅದನ್ನ ಕಾಲಿಂದ ಒದ್ರೆ ಯಾರ ತಪ್ಪು ನೀನೇ ಯೋಚ್ಸು.

ಗಂಗವ್ವ—ಸುಖವನ್ನ ಯಾರು ಕಾಲಿಂದೊದ್ರು ಸಾವ್ಕಾರ್ರೇ ? ಎಲ್ಲಾ ದುಡೀತಿರೋದು ಸುಖಕ್ಕಾಗಿಯೇ .... ನಾವಾದ್ರೂ ಅದೇನು ಬ್ಯಾಡಾ ಅಂತೇವೇನು ?

ಗಿರಿಯಪ್ಪ—ಹೌದು, ನನಗೆ ಗೊತ್ತಾಗತ್ತೆ ಗಂಗವ್ವಾ ನಿಮ್ಮ ಕಷ್ಟ. ಆದಕ್ಕಾಗಿಯೇ ನಾನಂದೆ ಸಂಕಪ್ಪ ಹತ್ರ–ಅಂವ ನಾನಂದಂತೆ ಕೇಳಿದ್ರೆ ನಿಮಗ್ಯಾರಿಗಾದ್ರೂ ಕಷ್ಟ ಇರ್ತೇನು ? ಸುಮ್ಮನೇ ಈ ಬಡತನದಲ್ಲಿ ಬಿದ್ದ್ಯಾಕೆ ನರಳಬೇಕು ನೀವು ?

ಗಂಗವ್ವ—ಸಾಹುಕಾರ್ರೇ, ನಮಗೆ ಈ ಬಡತನವೇ ಸಾಕು – ಆ ಶ್ರೀಮಂತಿಕೆ ಬೇಡ. ಸುಖ ಇಲ್ಲೂ ಇದೆ.

ಗಿರಿಯಪ್ಪ—ನೋಡು ಗಂಗೀ – ನಿನ್ನಪ್ಪನಂತೆ ನೀನೂ ಒಬ್ಬಳು ಹುಚ್ಚಿ ! ಯಾರಾದ್ರೂ ಲೋಕದಲ್ಲಿ ತಮ್ಗೆ ಶ್ರೀಮಂತಿಕೆ ಬೇಡ – ಬಡತನವೇ ಇರ್ಲಿ, ಸುಖಾ ಬೇಡ – ಕಷ್ಟವೇ ಇರ್ಲಿ ಅಂತ ಹೇಳ್ತಾರೇನು ಹೇಳು ? ನಿನಗಾ ಚನ್ನನ್ನ ಮದ್ವೇ ಆದರೆ ಏನು ಸುಖಾ ಸಿಕ್ಕೀತ್ಹೇಳು .... ಆತ ನಿನಗೆ ಏನು ಕೊಟ್ಟಾನು....ಕೊಡಲಿಕ್ಕವನಲ್ಲೇನದೆ ? ಕೇಳು–ಈಗ್ಲೂ ನೀನು ಇಷ್ಟಪಟ್ರೆ ಸಂಪತ್ತೂ, ಸುಖಾ ಇವು ನಿನ್ನ ಕಾಲ ಬುಡಕ್ಕೇ ಬರ್ತಾವೆ. ಆದ್ರಿಂದ ನನ್ನೊಂದಿಗೆ ಮದ್ವೆ ಆಗಿ ಆನಂದದಿಂದಿರು ನೀನು.

ಗಂಗವ್ವ—ಗಿರಿಯಪ್ಪನವ್ರೆ ! ತಮಗೀ ಮಾತಿನ ಉತ್ರಾ ಈ ಮೊದ್ಲೇ ಅಪ್ಪಾ ತಿಳ್ಸಿದ್ದಾನೆ. ಕೇಳಿ_ಬರೇ ಶ್ರೀಮಂತಿಕೆಯಲ್ಲೇ ಸುಖ ಇಲ್ಲ; ಪ್ರೇಮಾ ಒಂದಿದ್ರೆ ಬಡ್ತನದಲ್ಲೂ ಅದು ಇದ್ದೇ ಇದೆ. ಅದಕ್ಕಾಗಿಯೇ ಅವ್ರನ್ನೇ ನಾನು ವರ್‍ಸಿದೆ, ಅಪ್ಪನೂ ನಮ್ಮ ಮದ್ವೆಯನ್ನು ಮಾಡಿಬಿಟ್ಟ.

ಗಿರಿಯಪ್ಪ—ಆಂ-ಏನು ! ನಿನ್ನ ಮದ್ವೆ ಆಗಿಹೋಯ್ತೇನು ಹಾಗಾದ್ರೆ ಚನ್ನಪ್ಪ ಕೂಡ ? ಎಂಥಾ ಘಾತ ಮಾಡಿದ ಸಂಕಪ್ಪ ! ಗಂಗೀ, ನಿನ್ಗೆ ಲೋಕ್ದ ವ್ಯವಹಾರಜ್ಞಾನ ಇಲ್ಲಾ, ಮುಂದಿನ ಪ್ರಪಂಚದ ಅರಿವೂ ಇಲ್ಲಾ. ನೀನು ಬರೇ ಹುಡುಗಾಟಿಕೆಯಲ್ಲೇ ಇರುವಿ ಇನ್ನೂ. ಆದ್ರಿಂದ್ಲೇ ಪ್ರೇಮದ ಸ್ವರೂಪಿನ್ನೂ ತಿಳಿದಿಲ್ಲ ನಿನ್ಗೆ. ನೋಡು, ನಿಮ್ಮೀ ಬಡತನ ಮುಂದೆ ಹೀಗೇ ಬಲೀತೂ ಅಂದ್ರೆ ಈ ನಿನ್ನ ಪ್ರೇಮ, ಸೌಖ್ಯ, ಶಾಂತಿ-ಯಾವ್ದೂ ಉಳೀಲಾರ್ದು. ಆದ್ದರಿಂದ ನಿನ್ನ ಸುಖಕ್ಕಾಗಿಯೇ ಹೇಳ್ತೀನೆ ಕೇಳು_ಒಂದೊಮ್ಮೆ ನಿಮ್ಮದ್ವೇ ಆದ್ರೂ ಚಿಂತಿಲ್ಲಾ, ಈಗ್ಲೂ ನಾನು ಅದೇ ಹಿಂದಿನ ಪ್ರೇಮದಿಂದ ನಿನಗೆ ನನ್ನ ಪ್ರೇಮದ ಸ್ವಾಗತವನ್ನ ನೀಡ್ತೇನೆ.

ರಾಗ_ಜಯಜಯವಂತಿ ತಾಳ_ಝುಂಪಾ

ಎನ್ನ ಹೃದಯದೆ ನಿನ್ನ ಮೂರುತಿಯ ನಿಲಿಸೀ -
ರನ್ನೆ ನಾ ಮಾನಸದಿ ನಿನ್ನ ಪೂಜೆಯ ಗೈವೇ ॥ ಧೃ ॥
ಬನಬನದೆ ಸುಳಿಯುವಾ ದುಂಬಿಗಳ ವನಸುಮವು
ಸೆಳೆವ ತೆರವೆನ್ನ ಮನ ನಿನ್ನಯಾಧೀನಾ ॥ ೧ ॥

ಗಂಗಾ ! ಆ ಚನ್ನನೇ ನಿನ್ನ ಪತಿಯಾಗಿರಲೀ, ನೀನು ನನ್ನ ಉಪಪತ್ನಿಯಾಗಿಯಾದರೂ ಇರುವೆಯಾದರೆ ಅದಕ್ಕೂ ನನ್ನ ಪೂರ್ಣ ಸಂತೋಷವಿದೆ, ಇದಕ್ಕಾದರೂ ಒಪ್ಪು.

ಗಂಗವ್ವ—ಸಾಹುಕಾರ್‍ರೇ ! ನಿಮ್ಮ ಶ್ರೀಮಂತೀಕೆ, ನಿಮ್ಮ ವಿಷಯಲಾಲಸೇ, ನಿಮ್ಮಿಂದ ಈ ರೀತಿ ಮಾತಾಡಸ್ತಾ ಇದೆ. ಬಡವ್ರೀಗೆ ಮಾನಾ, ಮರ್ಯಾದೆ, ಹೃದ್ಯ, ಪ್ರೇಮಾ ಯಾವ್ದೂ ಇಲ್ಲಾ ಅಂತ ತಮ್ಮ ಭಾವನೆ

ಇದ್ದಿರಬೇಕು. ಆದ್ರೆ ಇದು ತಮ್ಮ ತಪ್ಪು ತಿಳುವಳಿಕೆ. ನಿಮ್ಮಂತೆಯೇ ನಮ್ಗೆ ಎಲ್ಲಾ ಇದೆ. ಶ್ರೀಮಂತರಾದ ನೀವು ವಿಷಯಸುಖಕ್ಕೋಸ್ಕರ ನಿಮ್ಮ ಘನತೆಯನ್ನ ಮರೆತರೆ ದ್ರವ್ಯಕ್ಕೋಸ್ಕರ ನಾವು ನಮ್ಮ ಹೃದಯ ವನ್ನ-ದೇಹವನ್ನ ಮಾರ್ಕೊಳ್ಳೋದಿಲ್ಲ. ಇದನ್ನ ಚೆನ್ನಾಗಿ ಜ್ಞಾಪಕ ವಲ್ಲಿಟ್ಟುಕೊಂಡಿರಿ. ಸಾವ್ಕಾರ್ರೇ-ಬರ್ತೇನೆ. (ಹೊರಡುವಳು)

ಗಿರಿಯಪ್ಪ—ಗಂಗವ್ವಾ - ನಿಲ್ಲು, ನಾನು ಹೇಳುವಷ್ಟನ್ನು ಕೇಳಿಕೊಂಡು ಹೋಗು. ಮುಂದೆ ನಿನಗೆ ಯೋಚಿಸುವುದಕ್ಕೆ ಸಮಯ ಉಳೀದು. ಕೇಳೂ....ನಿನ್ನೀ ಹಠಸಾಧನೆಯಿಂದ ನಿಮ್ಮ ಉಳಿಗಾಲವಿಲ್ಲಾ. ನಿಮ್ಮ ಹಾರಾಟಾ, ಕುಣ್ತಾ ಈ ಗಿರಿಯಪ್ನ ಮುಂದೆ ನಡೀದು. ಆಮೇಲೆ ಪಶ್ಚಾತ್ತಾಪಪಡಬೇಕಾದೀತು.

ಗಂಗವ್ವ—ಎಲ್ರೂ ಒಂದಿನ ಅಳೀತಕ್ಕವ್ರೇ ಸಾವ್ಕಾರ್ರೇ! ಈ ಪ್ರಪಂಚ ವೆಂಬುದೊಂದು ಮೂರು ದಿನದ ಸಂತೆ. ಈ ಸಂತೆಯಿಂದೆಲ್ಲರೂ ತಮ್ಮ ಜಗತ್ತಿನ ವ್ಯಾಪಾರವು ತೀರತಲೇ ಮನೆಗೆ ಮರಳಲೇಬೇಕು. ಇದರ ಅರಿವು ನನಗೆ ಚೆನ್ನಾಗಿದೆ.

ಗಿರಿಯಪ್ಪ—ಗಂಗವ್ವಾ! ಆ ಮೂರು ದಿನದ ನಿನ್ನ ಬಾಳನ್ನ ಮುಳ್ಳು ಹಾಸಿಗೆಯ ಮೇಲೆ ಕಳೀಬೇಡ, ಸುಖಸೌಧದಲ್ಲಿ ಹಂಸತೂಲಿಕಾ ತಲ್ಪದ ಮೇಲೆ ಕಳೆ.

ಗಂಗವ್ವ—ಕಷ್ಟದಲ್ಲೇ ಸುಖ ಇದೆ, ಮುಳ್ಳುಹಾಸಿಗೆಯ ಮೃತ್ಯುಶಯ್ಯೆಯಲ್ಲೇ ಶಿವನ ನೆನಪು. ಅಲ್ಲೇ ಮುಕ್ತಿಗವಶ್ಯವಾದ ಭಕ್ತ್ಯಂಕುರವೂ ಮೊಳೆ ಯುವುದು. ಸಾಹುಕಾರರೇ! ನನಗೆ ಜೀವನವನ್ನು ನರಕಕ್ಕೆಳೆಯುವ, ಹುಟ್ಟಿಸಿದ ಮಹದೇವನನ್ನು ಮರೆಯಿಸುವ ಆ ನಿಮ್ಮ ಸುಖಸೌಧದ ವಾಸ-ಶ್ರೀಮಂತಿಕೆಯ ಲವಲೇಶವಾದರೂ ಬೇಡ.

ಗಿರಿಯಪ್ಪ—ಜ್ಞಾಪಕದಲ್ಲಿಟ್ಟಿರು. ನಿನ್ನ ತಂದೆ ಬರ್ದುಕೊಟ್ಟ ಪ್ರೋನೋಟಿನ ಹಣದ ಬಗ್ಗೆ ನಾಳೆ ಕೋರ್ಟಿನಲ್ಲಿ ದಾವಾ ದಾಖಲ್ ಮಾಡ್ತೇನೆ.

ಗಂಗವ್ವ—ಅವರ ಚಿಂತೆ ನಮ್ಗಿಲ್ಲ. ಬೆಳ್ದಿದ್ದೇವೆ–ಕೊಡ್ತೇವೆ. ಕಣ್ಣು ಸುಗ್ಗೀ ಮುಗೀತ್ಲೇ ವಾಯ್ದೇಗಿಂತ ಮೊದಲೇ ಕಾಳು ಮಾರಾಟ ಮಾಡಿ ನಿಮ್ಮ ಹಣ ಮುಟ್ಸ್ತೀವೆ, ಬಡ್ಡೀ ಸಹಿತ ಮುಟ್ಸ್ತೀವೆ.

ಗಿರಿಯಪ್ಪ—ನಾಳೀನೇ ನಿಮ್ಮ ಕಾಳು ಕಡ್ಡೀ ಹರಾಜೀಗೆ ಕೋರ್ಟನಿಂದ ಆರ್ಡರ್ ತರ್ತೇನೆ. ಮುಂದೆ ತಿನ್ನಲಿಕ್ಕೆ ಒಂದು ಹಿಡೀ ಕಾಳೂ ಉಳೀ ಲಾರ್ದು....ಎಚ್ಚರಿಕೆ.

ಗಂಗವ್ವ—ನಾಲ್ಕು ಮನೇ ಕೂಲಿ ಕೆಲ್ಸಾ ಮಾಡಿ ದುಡ್ದು ತಿನ್ನತೇವೇ .... ಈ ದೇಹಾ ಮಾತ್ರ ಮಾರಾಟ ಮಾಡ್ಕೊಳ್ಳೋದಿಲ್ಲ.

ಗಿರಿಯಪ್ಪ—ಗಂಗೀ ! ನಿಮ್ಮ ಹೊಲಾ ಮನೇ ಮಾರಾಟ ಮಾಡ್ಸಿ. ನಿಮ್ಮಪ್ಪನ್ನ ತುರಂಗಕ್ಕಟ್ಟತೇನೆ ; ಜೈಲ್‌ಖಾನೇಲಿ ಇಡ್ತೇನೆ.

ಗಂಗವ್ವ—ಶ್ರೀಮಂತ್ರೀಗೆಲ್ಲವೂ ಸಾಧ್ಯ. ಆದರೆ ಲೋಕದಲ್ಲಿ ಧರ್ಮಶಾಲೆ, ಗುಡೀಕಟ್ಟೆ, ಮರದ ನೆರಳು ಬೇಕಷ್ಟಿವೆ. ಅಲ್ಲೇ ಆಶ್ರಯ ಹೊಂದ ತೇವೆ ; ಸಂತೋಷದಿಂದ ಬಾಳ್ತೇವೆ.

ಗಿರಿಯಪ್ಪ—ನಿನ್ನ ಚನ್ನನ್ನ ದೇಶಾಂತ್ರ ಅಟ್ತೇನೆ....ಕೂಡಿ ಬಾಳ್ಳಿಕ್ಕೆ ಬಿಡೋ ದಿಲ್ಲ. ಎಚ್ಚರಿಕೆ ! ಈ ನನ್ನ ಹಠವನ್ನಾದರೂ ನೋಡು.

ಗಂಗವ್ವ—ಒಂದೊಮ್ಮೆ ಹಾಗೆ ಮಾಡಿದ್ರೂ ಹಳ್ಳಿ ಹಳ್ಳೀ, ಮನೆ ಮನೇ ಸುತ್ತಿ ನಿಮ್ಮ ಘನಚರಿತ್ರೆಯನ್ನ ಬೀದಿ ಬೀದಿಯಲ್ಲಿ ಹಾಡ್ತಾ ತಿರ್ದು ತಿನ್ನತೇವೆ. ಆದರೆ ಎಂದೂ ಗಂಗೆ ಅಪವಿತ್ರಳಾಗೋದಿಲ್ಲಾ, ಹೃದಯವನ್ನ ಅಂಗಡಿ ಯಲ್ಲಿ ವಿಕ್ರಯಕ್ಕಿಡೋದಿಲ್ಲಾ.

ಗಿರಿಯಪ್ಪ—ಗಂಗವ್ವಾ ! ನಿನ್ನ ಗಂಡನ್ನ, ಹುಚ್ಚ ಚನ್ನನ್ನ ಹಿಡಿತರ್ಸಿ ನಿನ್ಮುಂದೇ ಆತನ ಚರ್ಮ ಸುಲ್ಸಿ ನರೀ ನಾಯಿಗಳಿಗೆ ಹಾಕ್ಸತೇನೆ, ಎಚ್ಚರಿಕೆ !

(ಗಂಗವ್ವನು ಚಿಟ್ಟನೆ ಚೀರಿ ನೆಲಕ್ಕೆ ಬೀಳುವಳು. ಅಷ್ಟರಲ್ಲಿ ಚನ್ನನು ಪ್ರವೇಶಿಸುವನು. ಹೆಂಡತಿಯನ್ನು ನೋಡಿ)

ಚನ್ನ—........ತೀರಿತೇನೋ ನಿನ್ನ ಅಳಲು ! ಸಾವ್ಕಾರಾ ........ ಎಚ್ಚರಿಕೆ ........ನಾನು ನಿನ್ನ ಯಾವ ಸಂಪತ್ತೂ........ಹೊಲಾ ಮನೇನೂ ನೋಡೋದಿಲ್ಲ. ಈ ಕ್ಷಣದಲ್ಲೇ....ನೀನು ಇಲ್ಲಿಂದ ಕಾಲೀಗೆ ಬುದ್ಧಿ ಹೇಳ್ದರೆ ಸರಿ, ಇಲ್ಲವಾದರೆ........ಒಂದೇ ಹೊಡತಕ್ಕೆ........ನಿನ್ನನ್ನ ಮಣ್ಣುಮುಕ್ಸಿಬಿಡ್ತೇನೆ. ಕೇಳ್ತೇನು ?........ಹೊರಡು ಇಲ್ಲಿಂದ.

ಗಿರಿಯಪ್ಪ—ಚನ್ನಾ ! ಸರ್ಪನ ಕೂಡ ಹಗೆತನ ಕಟ್ಟಿಕೊಂಡೆ ನೀನು. ನಿನ್ನ ಬಾಳಿನ ಆಶೆ ಮುಗೀತಿನ್ನು....... ಜಾಗ್ರತೆ ! ನೋಡ್ತಾ ಇರು. (ಬಿರುಗಣ್ಣಿನಿಂದ ನೋಡುತ್ತಾ ಹೋಗುವನು.)

ಚನ್ನ—(ಗಂಗೆಯ ಹತ್ತಿರಕ್ಕೆ ಬಂದು) .... ಗಂಗೀ ! ನಾನು ನೀಚ. ತಿಳ್ದೂ ತಿಳ್ದೂ ನಿನ್ನ ಮನಸ್ಸನ್ನ ಪರೀಕ್ಷೆ ಮಾಡೋದಕ್ಕಾಗಿ ನಾನು ಮರೆಯಲ್ಲೇ ನಿಂತೆ. ನೀನು ಕಷ್ಟಕ್ಕೆ ಹೆದ್ರಿ ಸಂಪತ್ತಿನ ಆಶೆಯಿಂದ....ಸಾವ್ಕಾರನ ಮಾತೀಗೆ ಮರುಳಾಗ್ತೀಯೋ ನೋಡ್ಬೇಕಂತ ನಾನು ಇದ್ರಿಗೆ ಬರಲಿಲ್ಲ. ಗಂಗೀ....ಹೌದು....ನೀನು। ಪರಮ ಪವಿತ್ರಳಾದ ಗಂಗಾ ನದೀಗಿಂತ್ಲೂ ಪವಿತ್ರಳು. ನಿನ್ನ ಪಾವಿತ್ರ್ಯವನ್ನ ಯಾರೂ ಸೂರೆಗೊಳ್ರು. ಗಂಗೀ ! ದಯ್ವಿಟ್ಟು ಕ್ಷಮ್ಸು. ನಾನು ಹತ್ತು ನಿಮಿಷ ಮೊದಲೇ ಬಂದಿದ್ರೆ ನಿನಗೀ ದುರವಸ್ಥೆ ಪ್ರಾಪ್ತವಾಗ್ತಾ ಇರ್ಲಿಲ್ಲ. ನನ್ನಿಂದಾಗೇ ನಾನೀ ಅವಸ್ಥೆ ತಂದ್ಕೊಟ್ಟೆ ನಿನ್ಗೆ ! ಗಂಗೀ....ಗಂಗೀ....ಗಂಗೀ ! ಏಳು ಹೋಗೋಣ. ಆ ನೀಚ ಹೊರ್ಟುಹೋದ....ಇನ್ನೇನೂ ಭಯಪಡಬೇಕಾಗಿಲ್ಲ ನೀನು. ಏಳು. (ಅವಳು ಅಲುಗಾಡದಿರಲು) ಹಾಂ–ಇದೇನು, ಗಂಗಿ ಮಾತಾಡ್ತೋ ದಿಲ್ಲ ! ಪೆಟ್ಟು ಬಲವಾಯ್ತೇನು ಬಿದ್ದು ? ಎಲ್ಲಾದ್ರೂ ಮ....ರವು ಸ್ಥಳಕ್ಕೆ ಏಟು ಬಿತ್ತೆ ? ಯಾರನ್ನ ಕೂಗ್ಲೀ ಇಲ್ಲಿ....ಯಾರೂ ಇಲ್ಲ ಹತ್ರ....ಅಯ್ಯೋ ದೇವ್ರೇ ! ತಲೆಯಿಂದ ರಕ್ತ ಸುರೀತಾ ಇದೆ. ಇನ್ನು ಇಲ್ಲೇ ಕೂತ್ರೆ ಇವಳ ಪ್ರಾಣಕ್ಕೇ ಅಪಾಯ ಬಂದೀತು. ಆದ್ರಿಂದ

ಇವಳನ್ನ ಬೇಗ ಹೊತ್ತು ಮನೇ ಕಡೆ ತಕ್ಕೊಂಡು ಹೋಗ್ತೇನೆ. (ನಿಧಾನವಾಗಿ ಅವಳನ್ನು ಹೆಗಲಮೇಲೇರಿಸಿಕೊಂಡು ಹೊತ್ತುಕೊಂಡು ಹೋಗುವನು.)

[ ತೆರೆ ಬೀಳುವುದು ]

## ನೋಟ ೬

[ಶಿವಗ್ರಾಮದ ಪಕ್ಕದ ರೈಲ್ವೇ ಸ್ಟೇಷನ್ನಿಂದ ಬರುವ ರಸ್ತೆ. ಗೌಡರ ಮಗ ರಾಮಯ್ಯನೂ ತಿಮ್ಮನೂ ಪ್ರವೇಶಿಸುವರು. ತಿಮ್ಮನ ತಲೆಯಮೇಲೆ ಪೆಟ್ಟಿಗೆ ಬೆಡ್ಡಿಂಗ್ ಇವೆ. ರಾಮಯ್ಯನ ಕೈಯಲ್ಲೊಂದು ಚಿಕ್ಕ ಸೂಟ್‌ಕೇಸ್ ಇದೆ.]

ರಾಮಯ್ಯ—ನೋಡು ತಿಮ್ಮಣ್ಣಾ ! ಇಂದು ನಾನು ಬೆಳಿಗ್ಯೆ ಎದ್ದು ಯಾರೋ ಒಳ್ಳೆಯವ್ರ ಮುಖಾ ನೋಡಿ ಪ್ರಯಾಣಕ್ಕೆ ಹೊರ್ಟಿದ್ದೇ ಅಂತ ಕಾಣತ್ತೆ. ಇಲ್ಲವಾದ್ರೆ ನೀನು ಕರ್ದ ಹೇಳಿದ ಹಾಂಗೆ ಹ್ಯಾಂಗೆ ಬರ್ತಿದ್ದಿ ಹೇಳು ಸ್ಟೇಷನ್ಗೆ !

ತಿಮ್ಮ— ಹೌದು ಸಣ್ಣಗೌಡ್ರಾ. ನಾನೀಗಿಲ್ಲಿ ಬಾರ್ದೇ ಇದ್ರೆ ನಿಮ್ಗೆ ಸ್ವಲ್ಪ ತೊಂದ್ರೀನೇ ಇತ್ತು. ನಮ್ಮ್ರೇ ಸ್ಟೇಷನ್ನಾಗೆ ಆಳು ಸಿಕ್ಕೋದು ಅಷ್ಟರಲ್ಲೇ ಇದೆ. ದೇವ್ರೇ ನನ್ನನ್ನ ಕರೆತಂದು ಬಿಟ್ಟ.

ರಾಮಯ್ಯ—ಹೌದಾ ತಿಮ್ಮಣ್ಣಾ....ದೇವ್ರೇ ನಿನ್ನನ್ನ ಕರ್ತಂದ್ನೋ ಅಥವಾ ದೇವಿಯೋ ? ಸತ್ಯ ಹೇಳು–ನೀನು ಸ್ಟೇಷನ್ನಿಗ್ಯಾಕ ಬಂದಿದ್ದೀ ಹೇಳು ?

ತಿಮ್ಮ—ಯಾಕನ್ನೀ ಸಣ್ಣ ಗೌಡ್ರಾ, ನಿಮ್ಗೇನು ಗೊತ್ತಿಲ್ಲೇನು – ಈ ಕುಡ್ಕರ ಇಚಾರ. ನಮ್ಮೂರ ಅಂಗ್ಡಿಯಲ್ಲಿ ಆ ಮಾದಾ ಈಗ ನೀರು ಹೆಚ್ಚು ಸೇರ್ಸೋಕೆ ಹೊಂಟವ್ನೆ ಹೆಂಡಕ್ಕೇ. ಅದ್ಕೇ ಏನೋ ಆಶೆಯಾಯ್ತು – ಒಳ್ಳೇದಷ್ಟು ಕುಡಿಯೋಣ ಅಂತ ಇಲ್ಲಿಗೆ ಬಂದೆ ಬುದ್ದೀ. ಆ ನೀರ ಹೆಂಡಾ ಕುಡ್ದೂ ಕುಡ್ದೂ ಬಾಯೆಲ್ಲಾ ಸಪ್ಪೆಬಿದ್ದುಹೋತು. ಅದಿರಲೀ

ಬುದ್ದೀ, ತಾವು ಏಕಾಏಕಿ ಹೇಳ್ದೇ ಕೇಳ್ದೇ ಹೊಂಟುಬಂದುಬಿಟ್ರಲ್ಲಾ, ಈಗ ಯಾವ ರಜೇ ಮತ್ತೆ ?

ರಾಮಯ್ಯ—ಯಾವ ರಜೆಯೂ ಇಲ್ಲವಪ್ಪಾ. ಆ ಪಟ್ಟಣದ ಅಶಾಂತಿ ಜೀವ್ನ ನನ್ನ ಮನಸ್ಸಿಗೆ ಬಹಳ ಬೇಸರವಾಗಿದೆ. ಆದ್ರಿಂದ ಆ ಓದೀಗೆಲ್ಲಾ ಶರ್ಣ ಹೊಡದು ಬಂದುಬಿಟ್ಟೆನಪ್ಪಾ ನಾನು ಊರಿಗೆ. ನಾನಿನ್ನು ಓದಲಿಕ್ಕೆ ಹೋಗೋದಿಲ್ಲ.

ತಿಮ್ಮ—ಅದೇನು ಬುದ್ದೀ ! ನೀವಾ ಓದು ಬಿಟ್ಟು ಈ ಹಳ್ಳೀಲಿ ಕೂತು ಏನ್ಮಾಡ್ತೀರಿ ?

ರಾಮಯ್ಯ—ಓದಿ ಏನ್ಮಾಡೋದಂತೀ ತಿಮ್ಮಣ್ಣಾ ಮತ್ತೆ ?

ತಿಮ್ಮ—ಅದ್ಯಾಕ ಬುದ್ದೀ ? ಓದ್ದೋರಿಗೆ ನೌಕರೀ ಸಿಗತ್ತೆ, ಸಂಬಳಾ ಬರತ್ತೆ. ಹಾಯಾಗಿ ಡೌಲಿಂದಿರಬಹುದಲ್ಲಾ ಅಲ್ಲೀ !

ರಾಮಯ್ಯ—ತಿಮ್ಮಣ್ಣಾ—ನಿಜವಾಗಿಯೂ ಅಲ್ಲಿನ ಡೌಲಿನ ಜೀವನದಲ್ಲಿ ನನಗೆ ಇಚ್ಛೆಯಿಲ್ಲ. ಕೊನೆಗೂ ಅದೊಂದು ಆತ್ಮವಿಕ್ರಯವೇ. ಅಲ್ಲಿದ್ದು ಯಾವ ಜಗತ್ತಿನ ಸೇವೆಯನ್ನೂ ಮಾಡಲಿಕ್ಕೆ ಶಕ್ಯವಿಲ್ಲ.

ತಿಮ್ಮ—ಹಾಗಾದ್ರೆ ಇಲ್ಲಿದ್ರೆ ಏನ್ಮಾಡಲಿಕ್ಕೆ ಬರತ್ತೆ ಬುದ್ದೀ ?

ರಾಮಯ್ಯ—ನನಗೆ ತಿಳಿದಮಟ್ಟಿಗೆ ಹಳ್ಳಿಗರ ಸೇವೆಯನ್ನು ಮಾಡಬಹುದು. ಅವರ ಆರ್ಥಿಕಸ್ಥಿತಿ, ಜೀವನದ ಮಟ್ಟ, ಜ್ಞಾನಶಕ್ತಿ ಇವನ್ನು ಹೆಚ್ಚಿಸಲು ದುಡಿಯಬಹುದು. ಹಳ್ಳಿಗಳ ಪುನರುಜ್ಜೀವನ ಕಾರ್ಯದಲ್ಲಿ ಹೆಣಗಾಡಬಹುದು.

ತಿಮ್ಮ—ಅದೇ ನನ್ನೊಡೆಯಾ ನಾನಂಬೋದು ! ಒಂದು ಒಳ್ಳೇ ನೌಕರಿಯಲ್ಲೇ ಇದ್ದು ನಿಮ್ಗೂ ಮತ್ತು ನಮ್ಗೂ ಕೂಡ ಸುಖಾ ಕಾಣೋಕೆ ಆಗೋದಿಲ್ಲೇನು ? ಅಲ್ಲಿರುವ ಮರ‍್ಯಾದೆ ಈ ಹಾಳು ಹಳ್ಳಿಯಲ್ಲಿದ್ರೆ ಸಿಕ್ಕೀತೇನು ಬುದ್ದೀ ?

ರಾಮಯ್ಯ—ತಿಮ್ಮಣ್ಣಾ ! ನಿಜವಾಗಿಯೂ ಅಲ್ಲಿದ್ದುಕೊಂಡು ಯಾವ ಕೆಲಸವನ್ನು ಮಾಡಲೂ ಸಾಧ್ಯವಿಲ್ಲ. ಮೊದಲೊಂದು ನೌಕರಿಗೆ ಸೇರುವವರೆಗೆ ಮಾತ್ರ ಮುಂದೆ ತಾನು ಹಾಗೆ ಮಾಡಬೇಕು, ಹೀಗೆ ಮಾಡಬೇಕು ಎಂಬ ಗಾಳಿಗೋಪುರವನ್ನು ಕಟ್ಟುತ್ತಲಿರುವುದು ; ಆದರೆ ಅಲ್ಲೊಂದು ಸ್ಥಾನವು ಸಿಕ್ಕಿತೆಂದರೆ ಮಾತ್ರ ಮೊದಲಿನ ಯಾವ ಕನಸೂ ಕಾರ್ಯಕ್ಕೆ ಬರುವುದಿಲ್ಲ. ಅಲ್ಲಿ ಕೇವಲ ಸ್ವಾರ್ಥವು ಬಲಿಯುತ್ತದೆ. ಹೃದಯವು ಬರಿದಾಗುತ್ತ ಹೋಗುತ್ತದೆ. ತಾನಿದ್ದ ಸ್ಥಾನದಿಂದ ಹೇಗೆ ಮಾಡಿದರೆ ತಮ್ಮ ಮೇಲಿನವರಿಗೆ ತೃಪ್ತಿಯಾದೀತು, ತಾನು ಇನ್ನೂ ಮೇಲಕ್ಕೆ ಹೇಗೆ ಏರಬಹುದು ಎಂಬ ಸ್ವಾರ್ಥದಾಶೆಯು ಮಾತ್ರ ಹೃದಯದಲ್ಲಿ ಮನೆಮಾಡಿಕೊಂಡಿರುತ್ತದೆ. ಇನ್ನು ಮರ್ಯಾದೆ–ಇದೂ ಅರ್ಥವಿಲ್ಲದುದೇ! ಸ್ವಾತಂತ್ರ್ಯವೇ ಇಲ್ಲದ ಮೇಲೆ ಇನ್ನು ಮರ್ಯಾದೆ ಎಲ್ಲಿ ಬಂತೋ ?

ತಿಮ್ಮ— ಇಲ್ಲೇನು ಸ್ವಸಂತ್ರ ಸ್ವಾಮೀ ಮತ್ತೆ ?

ರಾಮಯ್ಯ—ಜಗತ್ತಿನಲ್ಲಿ ನಿಜವಾದ ಸ್ವಾತಂತ್ರ್ಯ ಜೀವನವೇ ರೈತರದು, ನಿಜವಾದ ಸ್ವತಂತ್ರರೇ ರೈತರು. ಸೇವೆಯ ನಿಜವಾದ ಗುಟ್ಟನ್ನು, ಸುಖದ ನೆಲೆಗಟ್ಟನ್ನು, ಶಾಂತಿಯ ಹುಟ್ಟನ್ನು ಅರಿತವರೇ ಒಕ್ಕಲಿಗರು. ಅವರು ಬರಿಯ ಮನುಷ್ಯರಲ್ಲವಪ್ಪಾ. ಜಗತ್ತಿನ ಕಲ್ಯಾಣಕ್ಕಾಗಿ, ಲೋಕದ ಶ್ರೇಯಸ್ಸಿಗಾಗಿ ಪ್ರಾಣವನ್ನು ಮುಡುಪಾಗಿಟ್ಟು ಮುಕ್ತಿಯ ಸಾಧನೆಗೆ ಹೊರಟ ಕರ್ಮಯೋಗಿಗಳು.

ರಾಗ–ಪಟದೀಪ್–ತ್ರಿತಾಲ

ಮಾತಾಡುವ ಸ್ವಾಮಿಯೂ – ಪ್ರೇಮಿಯೂ
ರೈತನೆ ದಾತಾ – ವಿಧಾತಾ ಕಾರ್ಯಾಸಕ್ತ || ಧೃ ||
ಸೇವೆಯ ಭಾವಾ – ಜೀವಿತ ಧ್ಯೇಯ
ಭೂವಧು ಈಶನಾಕಾರ - ಸಾಕಾರಾ || ೧ ||

ತಿಮ್ಮ—ಏನೋ ವಡ್ಯಾ ! ನನಗೊಂದೂ ಅರ್ಥವೇ ಆಗೋದಿಲ್ಲ ಶಮ್ಮಾತು.

ರಾಮಯ್ಯ—ಹೌದು ತಿಮ್ಮಣ್ಣಾ, ಈ ಮಾತು ಸತ್ಯ. ನನ್ನ ಮಾತು ನಿಮ್ಗೆ ಅರ್ಥವಾಗೋದಿಲ್ಲ, ಅರ್ಥವನ್ನ ಮಾಡಿಕೊಳ್ಳೋ ಸ್ಥಿತಿಯಲ್ಲಿ ನೀವಿಲ್ಲ, ಅರ್ಥಮಾಡಿಕೊಳ್ಳುವಂತೆ ನಿಮ್ಮನ್ನು ನಾವಿಟ್ಟಿಲ್ಲ. ಆದ್ದರಿಂದಲೇ ಹಳ್ಳಿಗರನ್ನ ಎಚ್ಚರಿಸಿ ರೈತರ ಆತ್ಮಶಕ್ತಿಯ ತೇಜಸ್ಸಿನ ಅರಿವನ್ನವರಿಗೆ ಮಾಡಿಕೊಡಬೇಕೆಂಬುದೇ ನನ್ನ ಗುರಿ.

ತಿಮ್ಮ—ಆಗಲೀ ಸಣ್ಣಗೌಡ್ರೆ, ನೀವೇನೇನು ಮಾಡ್ತೀರೋ ಮಾಡ್ರಿ, ನಾನೂ ನೋಡ್ತಾಲೇ ಇರ್ತೇನೆ ಇರುವಷ್ಟು ದಿನ.

ರಾಮಯ್ಯ—ಅದಿರಲೀ ತಿಮ್ಮಾ! ತಂದೆಯವರು ಮನೇಲದಾರೇನೋ ?

ತಿಮ್ಮ—ಇಲ್ಲ ಬುದ್ದೀ – ನಿನ್ನೆ ಬೆಳಿಗ್ಗೆ ತುಮ್ಕೂರಿಂದ ಬಂದ್ರು; ಮತ್ತೆ ರಾತ್ರೀನೇ ಸಾವ್ಕಾರ್ರ ಜತೇಲಿ ಅದೆಲ್ಲಿ ತುಮ್ಕೂರಂತ್ಲೋ ಬೆಂಗ್ಳೂರಂತ್ಲೋ ಎಲ್ಲೋ ಕೆಲ್ಸಾ ಇದೇ ಅಂತ ಹೊರಟುಹೋಗಿಬಿಟ್ರು. ಇಂದೋ ನಾಳೆಯೋ ಬರಬಹುದು.

ರಾಮಯ್ಯ—ಅದ್ಯಾತಕ್ಕಪ್ಪಾ ಅಷ್ಟು ಅವಸರ! ಏನು ಕೋರ್ಟಿನ ಕೆಲಸ ಉಂಟಂತೇನು ?

ತಿಮ್ಮ—ಅದ್ಹ್ಯಾಂಗ್ ಗೊತ್ತಾಗಬೇಕು ನನ್ನೊಡ್ಯಾ ನನ್ಗೆ ? ನನ್ಗೇನಾದ್ರೂ ಹೇಳಿ ಹೋಗ್ತಾರೇನು ಅವ್ರು ? ಅವ್ರೀಗೆ ಈ ಬೆಂಗ್ಳೂರು ತುಮ್ಕೂರು ಅಂದ್ರೆ ಮನೇ ಹಿಂದಿನ ಹೊಲಕ್ಕೆ ಹೋಗಿ ಬಂದ್ಹಾಂಗೆ. ನಿತ್ಯ ಸುತ್ತಾ ಇರೋದೇ ಕೋರ್ಟು ಕಚೇರೀ ಅಂತ !

ರಾಮಯ್ಯ—ಏನೋ ತಿಮ್ಮಾ! ಬಹು ಭಾರಾ ಇದ್ಯೇನು ಪೆಟ್ಗೆ ? ಹಾಗಿದ್ರೆ ಇಲ್ಲಿ ಕೊಡು, ನಾನು ತಕ್ಕೋತೇನೆ; ಈ ಸೂಟ್‌ಕೇಸ್ ನೀನ್ತಕ್ಕೊ.

ತಿಮ್ಮ—ಬೇಡ ಬುದ್ದೀ – ಇನ್ನೆಷ್ಟು ದೂರ ? ಹೀಂಗೇ ಮಾತಾಡತಾ ಹೋಗೋಣ....ಬಂದೇಬಿಡ್ತು ಊರು. (ಹೋಗುವರು)

[ತೆರೆ ಮೇಲಕ್ಕೇರುವುದು]

# ನೋಟ ೭

[ ಸುಗ್ಗಿಯ ಕಣ—ಒಂದು ಕಡೆ ಕಾಳಿನ ರಾಶಿ. ರಾತ್ರಿಯ ಪ್ರಶಾಂತವಾದ ಬೆಳ್ದಿಂಗಳ ಸಮಯ. ಕೆಲವು ಜನ ಆಳುಗಳು ಕುಳಿತು ಎಲೆ ಅಡಿಕೆ ಸವಿಯುತ್ತಿರುವರು. ಸಂಕಪ್ಪ, ಚನ್ನನೂ ಅಲ್ಲೇ ಇರುವರು. ]

ಸಿದ್ದಪ್ಪ—(ಪ್ರವೇಶಿಸಿ) ಏನಪ್ಪಾ ಸಂಕಣ್ಣಾ ! ಸಂಣ ಗೌಡ್ರು ಬಂದಿಲ್ಲೇನು ಇನ್ನೂ ?

ಸಂಕಪ್ಪ—ಅವ್ರು ಓದ್ದೋರು ಕಣಪ್ಪಾ; ಎಲ್ಲಾ ಮಾತೂ ಕಾಲಾ ಅಂತಂದ್ರೆ ಅಚ್ಕೊತ್ತಿಟ್ಟಯ್ಹಂಗ. ಒಂಬತ್ತೂ ಅಂದ್ರೆ ಒಂಬತ್ತಕ್ಕೇ ಬಂದಾರು .... ನಾಲ್ಕು ನಿಮಿಷ ಮುಂದಿಲ್ಲಾ ಹಿಂದಿಲ್ಲಾ.

ಲಿಂಗಪ್ಪ—ಏನು ಸಂಕಣ್ಣಾ, ಅವ್ರು ನಿನ್ನೆ ಹೇಳ್ಕೊಟ್ಟ ಪದಾ ಕಲ್ತಿಯೇನು ? ಏನು ಚೆನ್ನಾಗೈತೋ ಅದು. ಅದೂ ಅವ್ರ ಬಾಯಿಂದ್ಲೇ ಕೇಳ್ಬೇಕು, ಒಳ್ಳೇ ಹುಮ್ಮಸ್ಸು ಬಂದಬಿಡತ್ತೆ....ಅಲ್ಲೇನೋ !

ಸಂಗಪ್ಪ—ನಾನೂ ಕಲ್ತಿದೀನದನ್ನ. ಆದ್ರೂ ಅವ್ರ ಹಾಂಗ್ ಅನ್ನೋಕೆ ಬರೋದಿಲ್ಲಾ. ಇಂದು ಕೋಳಿ ಕೂಗತಲೇ ಎದ್ದು ಚನ್ನಪ್ಪನೀಗೆ ತೊಂದ್ರೆ ಕೊಟ್ಟು ಹೇಳ್ಸಕೊಂಡು ಕಲ್ತಿದ್ದೇನೆ. ಇನ್ನೊಂದೆರಡು ದಿನಾ ಹೋದ್ರೆ ನಾನೂ ಚನ್ನಾಗಿಯೇ ಅಂದೇನದನ್ನ.

ಸಿದ್ದಪ್ಪ—ಅದಿರಲೀ ಬಿಡಪ್ಪಾ ಮುದ್ದಾ....ಈಗೊಂದು ಏನಾದ್ರೂ ಕಥೆ ಅನ್ನು ನೋಡೋಣ. ಸಂಣಗೌಡ್ರು ಬಂದಿದ್ದಾರೋ ಅಂತ ಬಂದುಬಿಟ್ಟೆ ನಾನು. ಈಗ ಬಾಳ ಬೇಸ್ರ ಆಗತೈತೆ.

ಸಂಕಪ್ಪ—ಏನು ಕಥೆ ಹೇಳ್ಳಪ್ಪಾ ? ನನ್ನ ಕಥೇನೇ ಕಥೆ. ಹ್ಯಾಂಗೂ ಚಂದ್ರ ಪರಕಾಸಾ ಹಾಲು ಹೊಯ್ದ್ಹಂಗ್ ಐತೆ. ನಾಲ್ಕು ಕೋಲು ಹಾಕೋದಾದ್ರೆ ಹಾಕ್ರಿ ನೋಡ್ತೇನಂತೆ.

ಲಿಂಗಪ್ಪ—ನಿನ್ಗೂ ಕೋಲಿನ ಹುಚ್ಚೇನು ಮತ್ತೆ ! ಆಗ್ಲಿ ಹಾಕ್ತೀವಿ. ಆದರೆ ಆ ದಿನಾ ಸಣ್ಣ ಗೌಡ್ರು ಹೇಳಿಕೊಟ್ರಲ್ಲಾ, ಅದನ್ನೇ ಹೇಳ್ಕೊಂಡು ಹಾಕಬೇಕು. ಹೇಳಿಕೊಡ್ತೀಯೇನು ?

ಸಂಕಪ್ಪ—ಹಾಂ-ಅದಕೇನಂತೆ .... ನಾನೇ ಪದಾ ಹೇಳ್ಕೊಡ್ತೇನೆ. ಹಿಂದೆ ನಾನೇನ್ಕುಣ್ದೋನಲ್ವೇ....ಪದಾ ಹೇಳ್ದೋನಲ್ವೇ ? ಏನು, ನನ್ನಾ ಮುದ್ಕಾ ಅಂತ ನಗಚಾಟ್ಕೇ ಮಾಡ್ತೀರೇನು ? ನಾನು ಬಾಯ್ಬಿಟ್ರೇ ಅಂದ್ರೆ ಮತ್ತೆ ನೀವೆಲ್ಲಾ ಹಾಂಗೆ ಕೋಲೂ ಕಾಲೂ ಎಲ್ಲಾ ಮರತೂ ನಿಂತಲ್ಲೇ ನಿಂತಬಿಡಬೇಕು....ನೋಡ್ತೀರೇನು ?

ಸಿದ್ದಪ್ಪ—ಸಂಕಣ್ಣನೂ ಬರೋದಾದ್ರೆ ಆಟಕ್ಕೆ ನಾನೂ ಒಂದು ಕೋಲು ಹಿಡೀತೇನಿ, ನೋಡ್ವ ಒಂದು ಆಟಾ !

ಸಂಕಪ್ಪ—ಅದೂ ಆಗ್ಲಪ್ಪಾ. ನಾಳೆಯೇನು ನಾನು ಕುಣೀತೇನೋ ಇಲ್ವೋ. ಇಂದೇ ಆಗಿಹೋಗ್ಲಿ ಎಲ್ಲಾ ಮುದ್ಕನ ಕುಣ್ತಾ. ಹೂಂ-ಮತ್ತೆ ಈರೀ ಎಲ್ರುಸ್ನೂ....ತರ್ಲೀ ಕೋಲನ್ನ.

ಲಿಂಗಪ್ಪ—ಲೇ ಚನ್ನಾ ! ಕೇಳ್ತೀನು ಮಾವಾ ಅಂದದ್ದು. ತಾ ಕೋಲನ್ನ ಬೇಗಾ. ಇಂಥಾ ಸಮಯ ಮತ್ತೆ ಸಿಗತ್ತೋ ಇಲ್ವೋ....ಮೇಲ್ಚಂದ್ರನ ಬೆಳ್ಳಾನ ಬೆಳ್ದಿಂಗಳು....ಕೆಳಗೆ ಕಣ್ದ ತುಂಬಾ ಬೆಳ್ದ ಕಾಳು. ಇಂಥಾ ಸಂತೋಷದ ದಿನ ಬೇಕಂದರೆ ಸಿಗತ್ತೇನು ರೈತರೀಗೆ ನಾಳೆ ! (ಚನ್ನನು ಕೋಲನ್ನು ತರುವನು. ಎಲ್ಲರೂ ಆಟಕ್ಕೆ ನಿಲ್ಲುವರು.)

## ಲಾವಣಿ

೧

ನೇಗಿಲ ಯೋಗಿಯೆ ದೈವ ಕಾಣಣ್ಣಾ | ನೇಗಿಲಿಂದಲೆ
ನಮ್ಮ ಜೀವಕಾಣಣ್ಣಾ |
ಯೋಗಿಗೆ ಧರೆಯೆಲ್ಲ ಖಣಿಯು ಕಾಣಣ್ಣಾ | ನೇಗಿಲೆ
ನಮ್ಮೆಲ್ಲರಾಧಾರವಣ್ಣಾ || ಪ ||

ಉಂಡುಟ್ಟು ಸುಖಿಪುದು ರೈತರಿಂದಣ್ಣಾ | ರೈತರೆಲ್ಲರೆ
ಜಗದ ಜೀವಾಳವಣ್ಣಾ |
ದಂಡಿಸಿ ದೇಹವ ಬೆವರನೆ ಸುರಿಸುವ | ಆತನ ಶ್ರಮದಿಂದೆ
ಲೋಕ ಕಾಣಣ್ಣಾ || ೧ ||

ಹಿಡಿಕೂಳು ಅರೆವೈಯಿ ರೈತರಿಗಣ್ಣಾ | ವೃಷ್ಟಾನ್ನ
ವೈಭವ ಲೋಕದೊಳಣ್ಣಾ |
ನಿಸ್ವಾರ್ಥ ಜೀವನ ರೈತರದಣ್ಣಾ | ಸ್ವಾರ್ಥದ
ದರ್ಪೋಕ್ತಿ ಲೋಕದೊಳಣ್ಣಾ || ೨ ||

ರೈತರ ಹಿತ ಲೋಕಕಲ್ಯಾಣವಣ್ಣಾ | ಒಡಲುರಿ
ದೇಶದ ನಾಶ ಕಾಣಣ್ಣಾ |
ಕೀರ್ತಿಗು ನಾಶಕು ರೈತ ಕಾಣಣ್ಣಾ | ಪರಮೇಶದಾಸನು
ಆತ ಕಾಣಣ್ಣಾ || ೩ ||

೨

ಏಳಿರಯ್ಯಾ ಬೇಗನೇಳಿರಯ್ಯ | ತಾಯ ಬಂಧ
ಮುಕ್ತಗೊಳಿಸೆ ಏಳಿರಯ್ಯಾ |
ಕೇಳಿರಯ್ಯಾ ಕೂಗ ಕೇಳಿರಯ್ಯಾ | ತಾಯ
ಆರ್ತನಾದವದೋ ಕೇಳಿರಯ್ಯಾ || ಪ ||

ಹೆತ್ತ ತಾಯಿ ಮಾತ್ರ ಒಬ್ಬ ತಾಯಿಯೇನೋ | ಮತ್ತೆ
ಹೊತ್ತು ಸಾಕಿದಾಕೆ ಮಾತೆಯಲ್ಲವೇನೋ |
ನಿತ್ಯ ದುಃಖದಿಂದ ಅವಳ್ಬೀಯುತಿರಲು | ಮನಕೆ
ಪಥ್ಯವೆಂತು ತೋರಿತಯ್ಯ ಬೇಗನೇಳಿ || ೧ ||

ಜಾತಿ ನೀತಿ ಎಲ್ಲ ಒಂದೆ ಕೂಡಿರೇಳೀ | ಬಲು
ಜಾತಿಯಾಗಿ ಗೋಳು ಬಂತು ಕೇಳಿರೇಳೀ |
ಮಾತೆ ಭಾರತಿಯು ಒಬ್ಬಳಿರುತಿರಲು | ಬೇರೆ ಜಾತಿ
ಭೀತಿ ಎಲ್ಲಿ ಬಂತು ಹೇಳಿರೇಳೀ || ೨ ||

ಕಣ್ಣ ಕೋಡಿ ಹರಿಯುತಿದೆ ನೀರು ತುಂಬೀ | ತಾಯಿ
ಸನ್ನೆ ಮಾಡಿ ಕರೆಯುತಿಹಳೆಮ್ಮ ನೋಡೀ |
ಉನ್ನತದ ಪೂರ್ವ ಶೌರ್ಯವನ್ನೆ ತೋರೀ | ಬೇಗ
ತಾಯ ಪಾಶ ಹರಿಸಲೀಗ ಬೇಗನೇಳೀ || ೩ ||

ರಾಮಯ್ಯ— (ಪ್ರವೇಶಿಸಿ) (ಸ್ವ) ಅಹಹಹಾ ! ಎಂತಹ ಆನಂದದ ಸನ್ನಿವೇಶ ಇದೂ ! ರೈತನ ಜನ್ಮದಲ್ಲೆಲ್ಲಾ ಹಗಲಿರುಳೂ ದುಡಿದು ಸಂತೋಷ ದಿಂದ ಹತ್ತು ನಿಮಿಷ ಕಾಲ ಕಳೆಯಬೇಕಂದ್ರೆ ಇಪ್ಪೊಂದೇ ದಿನ, ನಾಳೆ ಯಾರದ್ದೇ ಇರಲಿ, ಇಂದು ತಾವು ಬೆಳೆದ ಪೈರು ತಮ್ಮ ಕೈ ಸೇರಿದ ಜೀವನದ ಹೆಮ್ಮೆ ಜಗತ್ತನ್ನೇ – ಸಾಕತಕ್ಕ ಸಾಮರ್ಥ್ಯ ನಮ್ಮಲ್ಲಿದೆ ಎಂಬ ಎದೆಯ ಉಬ್ಬು ಈಗ ಇವರ ನರನಾಡಿಗಳಲ್ಲೂ ಹರಿಯುವ ರಕ್ತವನ್ನುಕ್ಕಿಸಿ ಪ್ರವಹಿಸುತ್ತಿದೆ !

## ಭಾವಗೀತೆ

ರೈತದೇವನೊ ಜಗಕೆ ಉಣಿಸುವನೀತ ದೇವನೊ |
ರೈತನುಸಿರದೆ ಇಳೆಯ ಸರ್ವರುಸಿರು |
ಮತ್ತೆಲ್ಲಿ ದೇವನಿಹ ಕಲ್ಲು ಮರ ಮಣ್ಣಿನೊಳು |
ಸ್ವಾರ್ಥತ್ಯಾಗದ ಕರ್ಮಯೋಗಿ ಇವನಲ್ಲದೇ ||

ಭಲೇ ರೈತಬಂಧುಗಳೇ ! ನೀವೇ ನಿಜವಾದ ಸುಖಿಗಳು. ಸಂಕಜ್ಜಾ ! ನಿಮ್ಮೀ ವೀರವಾಣಿಯ ಮುಂದೆ ನಾನು ತಲೆತಗ್ಗಿಸಬೇಕಾಗಿದೆ. ಅದೇನು ಮಾಧುರ್ಯವಪ್ಪಾ ನಿಮ್ಮ ಕಂಠದಲ್ಲಿ! ಆಗಲಿ ಇನ್ನೊಂದು.

ಸಂಕಪ್ಪ— ಸಾಕು ಗೌಡ್ರಾ....ಮುದುಕನ ಕುಣತ ಇನ್ನೇನು ನೋಡ್ತೀರಿ ನೀವು ! ನೀವು ಪ್ಯಾಟೇ ಶಾರದಾಗಿದ್ದೂ ನಾಟ್ಕಾ, ಸಿನಿಮಾ .... ನೋಡ್ತೋರು. ಬೇಕಬೇಕಾದ ಸಂಗೀತ ಕೇಳ್ತೋರು. ಇದೆಲ್ಲಾ ಯಾಕೆ ಬೇಕ್ರಪ್ಪಾ ನಿಮಗೇ !

ರಾಮಯ್ಯ—ಅಜ್ಜಾ ! ಆದರೆ ಆ ಯಾವ ಸಂಗೀತ, ನಾಟಕ, ಸಿನಿಮಾ ಗಳಲ್ಲೂ ನನಗೀ ಬಗೆಯ ಆನಂದವಾಗಿಲ್ಲ. ನಿಮ್ಮ ಕುಣಿತ, ಈ ಸನ್ನಿವೇಶ ನನ್ನ ಸಾಹಿತ್ಯಕ್ಕೊಂದು ಶೋಭೆ.

ನಿಂಗಪ್ಪ—ಸಣ್ಣ ಗೌಡ್ರಾ ! ಮೊನ್ನೇದಂತೂ ಕಲ್ತಂಗಾತಲ್ಲಾ, ಹಾಂಗಂತ್ರ ಇಂದೊಂದು ಹೊಸ ಹಾಡು ಅಂದ ತೋರ್ಸಿರಿ ; ನಾಳೇನೇ ಕಲೀತಾನೆ ನಿಮ್ಮಜ್ಜ ; ಕುಣಿದು ಅಂದು ತೋರಿಸುತ್ತೇವೆ ನಾವು.

ರಾಮಯ್ಯ—ಆಗಲಿ. ಇದೊಂದು ಹೊಸ ಗೀತೆಯನ್ನ ಕಟ್ಟಿ ತಂದಿದ್ದೇನೆ ನೋಡಿ; ಹೇಳ್ತೀನೆ ಕೇಳ್ರಿ.

## ಲಾವಣಿ

ಭೇರಿ ಬಡಿಯಿತು ಕಹಳೆ ಮೊಳಗಿತು ಬಾನು ಒದರಿತು ವೀರರೇ |
ಕರ್ಮಯೋಗಿಗಳೇಳಿರೇಳಿರಿ ಸದ್ದನಾಲಿಸಿ ಧೀರರೇ || ಪ ||

ಯೋಧರೊಳು ಬಿಸಿರಕ್ತ ಹೊಮ್ಮಿಸಿ ಸಾಧಕರ ಹುರಿದುಂಬಿಸಿ |
ಆದರದೆ ಕವಿ ಕಲೆಯ ಚಿಮ್ಮಿಸಿ ಕಾಯ್ದ ರೈತನದೆನ್ನುತಾ || ೧ ||

ಚನ್ನ ಬಾಲರ ಎತ್ತಿ ಆಡಲು ತನ್ನ ಜೀವನ ದೂಡಲು |
ಉನ್ನತದ ರಾಜ್ಯವನು ಕಟ್ಟಲು ಹೊನ್ನು ರೈತನದೆನ್ನುತಾ || ೨ ||

ವಸುಧೆ ಜನತೆಯ ಪಶುವು ಪಕ್ಷಿಯು ಎಸೆವ ತರುಲತೆ ವೃಕ್ಷದಾ |
ಉಸುರು ಹಿಡಿದಿಹ ಸರ್ವ ಜೀವರ ಕಸುವು ರೈತನದೆನ್ನುತಾ || ೩ ||

ಧರ್ಮ ನಿಂತಿದೆ–ಸತ್ಯ ನಿಂತಿದೆ–ಸರ್ವಶಾಂತಿಯು ನೆಲಸಿದೇ |
ಧರ್ಮಸತ್ಯ ಶಾಂತಿಪಾಲನೆ ಕರ್ಮ ರೈತನದೆನ್ನುತಾ || ೪ ||

ಸರ್ವರಾಜ್ಯವು–ಸರ್ವಕೋಶವು–ಸರ್ವಸಂಪದ ನಿಮ್ಮದೂ |
ಸರ್ವಭೋಗ್ಯರು ಬೇರೆ ದುಡಿವಾ ಭಾರ ರೈತನದೆನ್ನುತಾ || ೫ ||

ಇಲ್ಲಿ ಬೆಳೆದುದನಲ್ಲಿ ಉಣ್ಣುದು ಬಲ್ಲ ಮಾತಿದು ಸತ್ಯವೂ |
ಎಲ್ಲರನು ಸಲಹುವನು ಅಲ್ ಪರಮೇಶದಾಸರನೆನ್ನುತಾ || ೬ ||

ಸಿದ್ದಪ್ಪ— ಬಹು ಚನ್ನಾಗಿದೆ ಕಾಣ್ರಪ್ಪಾ ಈ ಪದಾ....ಚನ್ನಾ, ತೆಗೆದಿಟ್ಕೋ ಆ ಹಾಳೇ. ಗಟ್ಟಿಮಾಡಬೇಕು, ನಾಳೆ ಅದನ್ನೆಲ್ಲಾ....ಕೇಳಿತೇನು ?

(ಚನ್ನನು ತೆಗೆದುಕೊಳ್ಳುವನು.)

ರಾಮಯ್ಯ—ನಾಳೆ ನಾನು ಊರಲ್ಲಿರಲ್ಲ, ತುಮಕೂರಿಗೆ ಹೋಗಿಬರಬೇಕಾಗಿದೆ. ನಾಡಿದ್ದು ನಿಮ್ಮನ್ನ ನೋಡ್ತೇನೆ. ನಮಸ್ಕಾರ ಎಲ್ಲರಿಗೂ.

ಎಲ್ಲರೂ—ನಮಸ್ಕಾರ. (ರಾಮಯ್ಯನು ಹೋಗುವನು)

ಲಿಂಗಪ್ಪ—ಓದ್ದೋರಿಗೆ ಗರ್ವ ಹೆಚ್ಚೂ ಅಂತ ಜನರಂತಾರೆ. ನಿಜವಾಗ಼್ೂ ಇದು ಸುಳ್ಳು. ನೋಡಿ–ನಮ್ಮಪ್ಪಗೆ ಅದೆಷ್ಟು ವಿನಯ–ಎಷ್ಟು ನಮ್ರತೆ– ಎಷ್ಟು ಪ್ರೇಮ ನಮ್ಮೇಲೆ ! ಬೇರೆ ಓದ್ದೋರಾಗಿದ್ರೆ ನಮ್ಮ ಹತ್ರ ಮಾತಾಡ್ತಿದ್ದರೇನು ?

ಸಿದ್ದಪ್ಪ—ಅದೇನೋ ರಾತ್ರಿಶಾಲೀ ತೆರೀತಾರಂತಪ್ಪಾ ನಮ್ಗೆಲ್ಲ. ಓದೋಕೆ ಬಾರದಿದ್ದ ರೈತರೀಗೆ ದಿನಾ ಅಷ್ಟಷ್ಟೇ ಅಕ್ಷರಾ ಹೇಳ್ಕೊಟ್ಟು ಓದು–ಬರೆ ಯೋಕೆ ಕಲ್ಸತಾರಂತೆ. ಮಾರಾಯನಂತ಼್ೇ ಎಲ್ಲಾ ಹಳ್ಳಿಗಳಲ್ಲೂ ಹೀಗೆ ಒಬ್ಬೊಬ್ಬರು ಓದ್ದೋರು ಸೇರಕೊಂಡ್ರೆ ಹಳ್ಳೀಗ್ಳ ಉದ್ಧಾರವೇ ಆಗಿಹೋದೀತು, ಅಲ್ಲೇನು ? ಹಾಂ – ಗೌಡ್ರು ಹೇಳಿದ್ದಾಟ ನೆನಪ ದಲ್ಲೇನು ನಿನಗೆ ?

ಚನ್ನ—ಹಾಂ–ಚೆನ್ನಾಗಿ ನೆನ್ಪದೆ. ಭೇರಿ....ಬಡಿಯಿತು....ಕಹಳೆ....

ಎಲ್ಲರೂ—ಭೇಷ್....ಭೇಷ್ !

[ ತೆರೆ ಬೀಳುವುದು ]

## ನೋಟ ೮

[ಶಿವಗ್ರಾಮದ ಒಂದು ಗಲ್ಲಿ. ತಲವಾರ ತಿಮ್ಮನು ಪ್ರವೇಶಿಸುವನು.]

ತಿಮ್ಮ—ಏನನ್ಯಾಯಾನ್ರಪ್ಪಾ ಇದು. ಇನ್ನು ಬಡ್ವರಂತೂ ಉಳಕೊಳ್ಳೋ ಹಾಂಗೇ ಇಲ್ಲ. ಬೇಲೀನೇ ಎದ್ದು ಹೊಲಾ ಮೇಯೋಕೆ ಹತ್ತಿತೂ

ಅಂದ್ರೆ ಇನ್ನ ಹ್ಯಾಂಗ್ ಇರೋಕೆ ಬರತ್ತೆ ! ದೊಡ್ಡದೊಡ್ಡೋರೇ ಸೇರ್ಕೊಂಡು ಬಡ್ವರ ಕುತ್ತಿಗೀ ಹಿಚ್ಕೋಕೆ ಪ್ರಾರಂಭಿಸಿದ್ರೂ ಅಂದ್ರೇ ಇನ್ನೀ ಬಡ್ಡೀಮಕ್ಕಳು ಉಳಿಯೋದಾದ್ರೂ ಹ್ಯಾಂಗ್ಸತ್ತೆ ? ಅಂತೂ ಈ ಗೌಡಾ ಸಾವ್ಕಾರಾ ಸೇರ್ಕೊಂಡು ಒಂದು ಮನೇನಂತೂ ನೆಲಮಟ್ಟ ಮಾಡಿದ್ರು. ಹೋತು, ಸಂಕಪ್ನ ಮನೇ ಕಂತಿಯೋ ಹೋತು. ಅನ್ನಾ ನೀರ್ಬಿಟ್ಟು, ಮೈ ಬೆವ್ರು ಸುರ್ಸೀ ದೇಹಾ ದಣಕೊಂಡು ಮಾಡ್ತ ಮನೇನ ನೀಚ್ರು ಒಂದೇ ದಿನದಲ್ಲಿ ಲೂಟೀ ಮಾಡ್ಬಿಟ್ರು. ಏನ ದರೋಡೆಯಪ್ಪಾ ಇದೂ....ಇದೆಂಥಾ ಸಾಲ್ದ ವಸೂಲಿಯಪ್ಪಾ ? ಆ ದಿನ್ವೂ ನಾನೇ ಕಂಡಿದ್ದೆ....ಸಾವ್ಕಾರಾ ಬರೇ ನೂರೈವತ್ತು ರೂಪಾಯಿ ಲೆಕ್ಕಾ ಹೇಳಿ, ಮುನ್ನೂರಕ್ಕೆ ನೋಟು ಬರ್ಸಕೊಂಡದ್ದು. ಅದು ಇಷ್ಟೊಂದು ಭರಕಾಸಾ ನಾನ್ನೂರೈವತ್ತಾದ್ದ ಹ್ಯಾಂಗಪ್ಪಾ ? ನೋಡನೋಡ್ತಾ ಕಣ್ದ ಕಾಳ ನ್ನೆಲ್ಲಾ ಹರಾಜ್ ಮಾಡ್ಸಿ ದೋಚ್ಕೊಂಡ್ ಬಿಟ್ನಲ್ಲಾ ಈ ಸಾವ್ಕಾರ ! ನಾಳೆ ಬಡ್ವ ಯೇಸ್ಸಿನ್ಬೇಕು ? ಕೇಣೀ ಹೊಲ್ದೋರಿಗೇನ ಕೊಡ್ಬೇಕು? ಕಂದಾಯ ಏನ್ತೆರಬೇಕು ? ಅಯ್ಯೋ ಗೋಳೇ ! ಆ ಅಜ್ಜ ಗೋಳೂ, ಚನ್ನಪ್ನ ಕೂಗು, ಆ ಗಂಗವ್ನ ಅಳೂ ಕಂಡು ನನ್ನೆದ್ಯೇ ಕರ್ಗಿ ನೀರಾಗಿ ಹೋತು .... ಆದ್ರೆ ಆ ಕಟ್ಕರ ಮನ್ಸು ಮಾತ್ರ ಕರ್ಗಲಿಲ್ಲ. ಆಗಲೀ, ಬಡ್ವರನ್ನ ದೇವ್ರೇ ಕಾಯ್ಬೇಕು.

ಮುದ್ದಜ್ಜ—(ಪ್ರವೇಶಿಸಿ) ತಿಮ್ಮಾ ! ಕೇಳ್ದಿಯೇನೋ ಇಂದಿನ ಪುರಾಣ ? ಇನ್ನು ಲೋಕದಾಗ ಬಡ್ವರು ಬದುಕೋದುಂಟೇನು ?

ತಿಮ್ಮ—ಕೇಳಿದ್ದು ಮಾತ್ರ ಅಲ್ಲಾ....ಕಣ್ಣಲ್ಲಿ ಕಂಡೆನಪ್ಪಾ, ನಿಮ್ಮ ಸಾವ್ಕಾರ್ರ ದರೋಡಿ ! ಔಷಧಕ್ಕೆ ಬೇಕಂದ್ರೆ ನಾಲ್ಕು ಕಾಳು ಉಳ್ಸಲಿಲ್ಲ ನಿಮ್ಮ ಸಾವ್ಕಾರಾ ಕಣ್ದಲ್ಲಿ !

ಮುದ್ದಜ್ಜ—ಅದಲ್ಲಪ್ಪ ನಾನನ್ನೋದು; ನೀನಿನ್ನೂ ಬೆಳಗಿಂದೇ ವಿಚಾರಾ ಹೇಳ್ತಾ ಕೂತಿದ್ದೀ, ಈಗಿಂದು ಕೇಳ್ಳಿಲ್ಲೇನು ?

ತಿಮ್ಮ—ಅದೇನಪ್ಪಾ-ಮತ್ತೆ ?

ಮುದ್ದಜ್ಜ—ಈ ನೋಟ್ನಿ ಮೊದಲೇ ಸಂಕಣ್ಣ ಅವನ ಮನೇನಾ ಸಾವ್ಕಾರ್ರೀಗೆ ಅಡ್ವು ಮಾಡಿಕೊಟ್ಟಿದ್ದಾ, ಆದ್ರೆ ಬಡ್ಡೀನೂ ತೆರಲಿಲ್ಲಂತೆ. ಇಂದು ಸಾವ್ಕಾರಾ ಅದನ್ನೂ ಹಿಡ್ದನಪ್ಪಾ! ಈಗ ಸಂಕಣ್ಣ ಅಳಿಯಾ ಮಗ್ಳನ್ನ ಕಟ್ಕೊಂಡು ದೇಶಾಂತ್ರ ಹೊರಡೋದೊಂದು ನಿಂತದೆ!

ತಿಮ್ಮ—ನಾನು ಸ್ಟೇರ್ಷಗೆ ಹೋದೋನು ಈಗ ಬಂದೆ ಕಾಣಪ್ಪಾ; ನಂಗೊತ್ತೇ ಇಲ್ಲಾ ಈ ವಿಚಾರಾ. ಹಾಗಾದ್ರೆ ಸಂಕಣ್ಣ ಮನೇ ಬಿಟ್ಟು ಹೊಂಟ್ನೇನು?

ಮುದ್ದಜ್ಜ—ಹೊರ್ಡೋದಾದ್ರೂ ಹ್ಯಾಂಗಪ್ಪಾ? ಎಲ್ಲಿಗೆ ಹೋಗಿ ನಿಲ್ಲಬೇಕು ಈಗ ಅಂವ? ಹಳ್ಳದ ಮ್ಯಾಗಿನ ಹೊಲದಾಗ ಜೋಪ್ಡೀ ಕಟ್ಕೋತಾನಂತ. ಆವರೇಗೂ ಇರೋಕೆ ನಾಲ್ಕು ದಿನಾ ಅವಕಾಶ ಸಿಕ್ಕಿದೇ ಅಂತ ಕಾಣತ್ತೆ.

ತಿಮ್ಮ—ಹಾಗಾದ್ರೆ ಹೊಲಾ ಕೊಟ್ಟವ್ರಿಗೇನು ಕೊಟ್ಟ ಸಂಕಪ್ಪಾ?

ಮುದ್ದಜ್ಜ—ಅದೊಂದು ನರಕ ಕಾಣಪ್ಪಾ ಈಗ ಅಲ್ಲಿ! ಸುತ್ತಿನಿಂದ್ಲೂ ಎಳ್ದು ತಿನ್ನತಿದ್ದಾರೆ ಈಗ ಅವನ್ನ. ಸಿದ್ದಪ್ಪ ಯೇನೋ ಅನ್ನ ಹೊಲಾ ಅಡ್ವು ಮಾಡ್ಕೊಂಡು ಎಲ್ಲಾರ ಸಾಲ್ವೂ ತೀರ್ಸುವ ಹಾಂಗೆ ಕಾಣ್ಸತ್ತೆ.

ತಿಮ್ಮ—ಏನು ಜಿದ್ದ ಸಾಧ್ಸಿಬಿಟ್ಟೆ ನಿಮ್ಮ ಧಣೀ ಮುದ್ದಜ್ಜಾ! ಹೋಗ್ಯೇ ಬಿಟ್ಟಿತಲ್ಲಾ ಒಂದು ಮನೇ ಸಂಕಪ್ಪಂದೂ.

ಮುದ್ದಜ್ಜ—ತಿಮ್ಮಣ್ಣಾ, ನನ್ಗೆಲ್ಲಾ ಗೊತ್ತಿದೆ ಇದ್ರ ಕಾರಣಾ. (ಕಿವಿಯಲ್ಲಿ ಹೇಳುವನು) ಅದ್ಕೇ ಇದೆಲ್ಲಾ ದೊಡ್ಡ ಪುರಾಣಾ.

ತಿಮ್ಮ—ಅಯ್ಯಯ್ಯಯ್ಯಯ್ಯೋ! ಎಂಥಾ ಹೇಸೀ ಕೆಲ್ಸಾರಪ್ಪಾ ಇದೂ! ಮುದ್ದಜ್ಜಾ, ಈ ವಿಷ್ಯ ಏನಾದ್ರೂ ಸಾವ್ಕಾರ್ರ ಮನೆಯೋರಿಗ್ಗೊತ್ತಾದ್ರೆ ಅವ್ರೇನಂದಕೊಂಡಾರು ಹೇಳು!

ಮುದ್ದಜ್ಜ—ಅವ್ರೊಪ್ಪೇರಿಗೆ ಗೊತ್ತುಂಟು ಗೊತ್ತಿಲ್ಲಾ ಅಂತಿದೆ ಈ ವಿಷ್ಯ. ಇನ್ನ ನಾನ್ನುಪ್ನೆ ಇರೋದಿಲ್ಲಾ. ಏನಾದ್ರೂ ಪ್ರಯತ್ನ ಮಾಡಿ ಆ ಸಂಕಜ್ಜ ಮನೇ ಒಂದು ಅಳೀದಿದ್ದಾಂಗ ನೋಡ್ಕೋಬೇಕು. ಬರ್‍ತೀನೆ–ಏನು (ಹೋಗುವನು)

ತಿಮ್ಮ—ಹಾಂ–ಹಾಂ–ಹಾಂಗೇ ಮಾಡಪ್ಪಾ. (ಹೋಗುತ್ತ) ನಾಸೀಗ ಸಣ್ಣ ಗೌಡ್ರಿಗೂ ಅಷ್ಟು ಈ ಇಚಾರಾ ತಿಳ್ಸಿಬಿಡ್ತೇನೆ. (ಹೋಗುವನು)

[ತೆರೆ ಬೀಳುವುದು]

## ನೋಟ ೯

[ಗೌಡರ ಮನೆ. ತಿಮ್ಮನೂ ರಾಮಯ್ಯನೂ ಕುಳಿತಿರುವರು]

ರಾಮಯ್ಯ—ಅಬ್ಬಬ್ಬಬ್ಬಾ! ಎಂತಹ ರಾಕ್ಷಸೀಕೃತ್ಯ ತಿಮ್ಮಣ್ಣಾ ಇದೂ! ಹಾಗಾದ್ರೆ ಬಡ್ವರನ್ನ ಕೇಳೋರೇ ಇಲ್ವೇನು ಲೋಕ್ದಲ್ಲಿ?

ತಿಮ್ಮ—ಈಗ ನೋಡಿಪ್ರೆ ಹಾಂಗೇ ತೋರತ್ತೆ ಸಣ್ಣ ಗೌಡ್ರಾ. ದುಡ್ಡಿನ್ಮುಂದೆ ಎಂಥವನಾದ್ರೂ ದೊಗ್ಗ ಸಲಾಮು ಹೊಡೀಲೇಬೇಕು.

ರಾಮಯ್ಯ—ಆದರೆ ಈ ಪಾಪ ನನ್ಮ ತಂದೆಯವರೀಗೆ ಯಾಕೆ ಬೇಕಿತ್ತು? ಈ ರೀತಿ ಸಂಪಾದ್ಸಿದ ಹಣ ಎಲ್ಲಾ ಇನ್ನೆಷ್ಟು ದಿವ್ಸ ಉಳೀತ್ತೆ ಹೇಳು!

ತಿಮ್ಮ—ಸಣ್ಣ ಗೌಡ್ರಾ! ಬ್ಯಾಡ್ರೀ, ನಿಧಾನವಾಗಿ ಮಾತಾಡ್ರಿ. ಅಪ್ಪೋರ ಊಟಾಗ್ತಾ ಬಂತು. ಮತ್ತೆಲ್ಲಾದ್ರೂ ಇದು ಅವ್ರ ಕಿವೀಗೆ ಬಿತ್ತೂ ಅಂತಂದ್ರೆ ಮನೆ ಎಲ್ಲಾ ರಂಪ ಎಬ್ಸಿಬಿಟ್ಟಾರು. ನಾವೇನು ಇರೋ ಹಾಂಗೇ ಇಲ್ಲ ಊರಲ್ಲೀ. ನೀವೇನೋ ಬುದ್ಧಿವಂತ್ರು, ಓದ್ದೋರು, ಹ್ಯಾಂಗೋ ಹಾರ್‍ಕೊಂಡ್ಬಿಡ್ತೀರಿ; ಮತ್ತೆ ಆ ಸಿಟ್ನೆಲ್ಲಾ ಗೌಡ್ರು ಆಳು ಕಾಳೀನ ಮೇಲೆ ತೀರ್‍ಸಿಕೊಂಡುಬಿಡ್ತಾರೆ!

ರಾಮಯ್ಯ—ಓಹೋಹೋಹೋ! ಆ ಕಾಲೆಲ್ಲಾ ಆಗಿಹೋಯ್ತು ತಿಮ್ಮಾ! ಬರಲೇಳು ಅಪ್ಪಾ. ಇನ್ನು ಹೀಗೆ ಅಂಜ್ತಾ ಕೂತ್ರೆ ಊರೆಲ್ಲಾ ಹಾಳಾಗಿ ಹೋದೀತು, ಕೇಳ್ತೀನು.

ತಿಮ್ಮ—(ಸ್ವ) ಬಂದೇಬಿಟ್ರಲ್ಲಪ್ಪಾ ಗೌಡ್ರು! (ಭಯದಿಂದ ನಿಲ್ಲುವನು)

ಗೌಡ—(ಪ್ರವೇಶಿಸಿ) ಹೂಂ, ಅಂತೂ ನೀನೊಬ್ಬ ಬಂದು ಈಗ ಊರನ್ನ ಉದ್ಧಾರ ಮಾಡ್ಲಿಕ್ಕೆ ಹೊರಟಿದ್ದೀ ಅನ್ನು! ಆಗಲ್ಯಲ್ಲಾ ಅದೂ ಒಂದು ಚಂದಾ....ಜೀವಿರುವಾಗ್ಲೇ ಕಣ್ಣಿಂದ ನೋಡಿ ಸಾಯೋಣಂತೆ.

ತಿಮ್ಮ—ಅಲ್ಲ ಬುದ್ದೀ – ತಮ್ಮ ವಿಚಾರಾ ಅಲ್ಲ ಅಂದದ್ದು ಸಂಣ ಗೌಡ್ರು.

ಗೌಡ—(ಸಿಟ್ಟಿನಿಂದ) ಆಂ .... ಸುಮ್ಮನಿರೋ ತಿಮ್ಮಾ ನೀನಲ್ಲೀ – ಎಲ್ಲಾ ನಂಗೊತ್ತಿದೆ. ಈಗಿನ ಕಾಲವೇ ಅಂಥಾದ್ದು....ಕಿವೀಗಿಂತ್ಲೂ ಕೋಡೇ ಮುಂದೆ! ಎಲ್ರೂ ಬುದ್ಧಿ ಹೇಳೋರೇ....ಎಲ್ರೂ ಪಂಡಿತ್ರೇ!

ರಾಮಯ್ಯ—ತಪ್ಪು ಮಾಡಿದರೆ ಯಾರಿಗೆ ಯಾರು ಹೇಳ್ಳಿಕ್ಕೂ ಅಧಿಕಾರಾ ಇದೆ. ಇದೆಲ್ಲಾ ಏನು ಮತ್ತೆ ನಿಮ್ಮ ಲೂಟೀ ಬಡ್ವರದ್ದು? ಸಾಹ್ಕಾ ರ್ರೀಗೆ ಬಡತನ ಬಂದಿದ್ದರೆ ಅವರು ದುಡ್ಕೋತಿದ್ರು, ನಿಮಗ್ಯಾಕ ಬೇಕಿತ್ತು ಇದೆಲ್ಲಾ ಈ ಬಡವರ ಶಾಪ!

ಗೌಡ—ಹಾಂ ಹಾಂ–ಹೌದು. ಈಗ ನೀನು ಕಲ್ತೀ, ಓದ್ದೀ, ಬುದ್ಧಿವಂತ ನಾದೀ; ಆದ್ದರಿಂದ್ಲೇ ಈ ಬುದ್ದೀ ಹೇಳ್ಳಿಕ್ಕೆ ಹೊರಟಿದ್ದೀ ಈಗ ಹಿರೀ ರೀಗೆ. ಈ ಬಡ್ವರ ಶಾಪ, ರೈತ್ರ ಗೋಳು, ಒಕ್ಕಲಿಗ್ರ ಕಣ್ಣೀರು ಅಂತ ಕೂತಿದ್ರೆ ಇದುವರೆಗಿನ ನಿನ್ನ ಓದಿನ ಖರ್ಚನ್ನು ತಿಂಗ್ಳು ತಿಂಗ್ಳೀಗೆ ನೂರಂದ್ರೆ ನೂರು, ಐವತ್ತಂದ್ರೆ ಐವತ್ತು ತುಂಬ್ಸಲಿಕ್ಕೆ ಬರ್ತ್ತಿರಲಿಲ್ಲ! ಹಣಾ ಬೇಕಂತಿದ್ರೆ ಎಲ್ಲಾ ವಿದ್ಯೇನೂ ಖರ್ಚುಮಾಡಬೇಕಾಗತ್ತೆ .... ಬೇಕಾದ ಆಟಾನಾದ್ರೂ ಆಡ್ಬೇಕಾಗತ್ತೆ–ಗೊತ್ತಾಯ್ತೇನು?

ರಾಮಯ್ಯ—ಬೇಡಪ್ಪಾ-ಈ ರೀತಿ ಸಂಪಾದನೆ ಮಾಡಿದ ಹಣಾ ನನ್ನ ವಿದ್ಯೆಗೆ ಬೇಡ. ಈ ಪಾಪವನ್ನ ಹೊರತಕ್ಕವರಾದ್ರೂ ಯಾರು ಹೇಳಿ ?

ಗೌಡ—ಮತ್ತೆ ಹ್ಯಾಂಗೋತ್ತೀ ಮುಂದ ನೀನು ? ಈ ಪಾಪ ಪುಣ್ಯ ಎಲ್ಲಾ ಈಗಲ್ಲಾ ನೋಡ್ತಾ ಕುಂತಿರೋದು....ನಮ್ಮ ಹೊಟ್ಟೆ ತುಂಬಿದನಂತ್ರ.

ರಾಮಯ್ಯ—ಹೌದಪ್ಪಾ-ಅದಕ್ಕಾಗಿಯೇ ಈ ತೊಂದ್ರೆ ಎಲ್ಲಾ ಬೇಡ ಅಂತ ನಾನು ಓದೀಗೆ ಶರಣಾರ್ತಿ ಹಾಕಿ ಬಂದುಬಿಟ್ಟಿದ್ದೇನೆ. ನನಗಾಗಿ ಈ ಪಾಪ ಕಟ್ಕೊಳ್ಳೋ ತೊಂದರೇಗೆ ಬೀಳಬೇಡಿ ನೀವಿನ್ನು.

ಗೌಡ—ಆಂ ! ಏನು, ಓದೀಗೆ ಶರಣಾರ್ತಿ ಹೊಡ್ದಿಯಾ ? ಮುಂದೇನು ಮಾಡ್ಬೇಕಂತಿದ್ದೀಯೋ ಹಾಗಾದ್ರೆ ನೀನು ರಾಮಯ್ಯ ?

ರಾಮಯ್ಯ--ಎಲ್ಲಾ ರೈತ್ರೂ ಏನ್ಮಾಡ್ತಾರೋ ಅದನ್ನೇ. ಮನೇ ಇದೆ, ಹೊಲಾ ಇದೆ, ನೇಗ್ಲು ಇದೆ, ಎತ್ತಿದೆ. ಇನ್ನೇನು ಬೇಕು ಹೆಚ್ಚಿಗೆ ?

ಗೌಡ—ಆದರೆ ಆ ಪಟ್ಟಣದಲ್ಲಿ ಹೇಟ್ ಬೂಟ್ ಹಾಕ್ಕೊಂಡು ತಿರ್ಗಿದೋರಿಗೆ, ಕಚ್ಚೆ ಕೀಸಿಕೊಂಡು ಹೋಟ್ಲು ತಿಂಡೀ ತಿನ್ತಾ, ಸಿನಿಮಾ ನಾಟ್ಕಾ ನೋಡ್ತಾ ಮೆರೀತಿದ್ದೋರಿಗೆ ಈ ಬೇಸಾಯ್ದ ಕಷ್ಟ ಒಗ್ಗೋದಿಲ್ಲಾ ಕಣಪ್ಪಾ. ಬೇಸಾಯ ಅಂತ ಅಂದ್ರೇನು ಆಟಾ ಅಂತ ತಿಳ್ದಿಯೇನು ?

ರಾಮಯ್ಯ—ಒಬ್ಬ ರೈತನ ಹೊಟ್ಟೆಯಲ್ಲಿ ಹುಟ್ಟಿಯೂ ಹಳ್ಳಿಯಲ್ಲೇ ಬೆಳೆದು ರೈತರ ದುಡಿತವನ್ನು ಹಗ್ಲೂ ರಾತ್ರಿಯೂ ಕಂಡಿರುವ ನನಗೆ ಬೇಸಾಯ ಅಂದ್ರೇನು ಆಟ್ದ ಕೆಲ್ಸಾ ಅಲ್ಲಾ - ಬಹು ಪ್ರಯಾಸ್ದ ಕೆಲ್ಸಾ ಅಂತ ಗೊತ್ತಿದೆ. ಆದರೆ ಅದು ಪ್ರಾರಂಭದಲ್ಲಿ ನನಗೆ ಬಹು ಕಷ್ಟವಾದ್ರೂ ಆಗ ಬಹುದು. ನೀವು ಸುಖದಿಂದ ಬೆಳೆಸಿದ ಈ ದೇಹಕ್ಕೆ ಒಗ್ಗದೆಯಿದ್ರೂ ಇರ್ಬಹುದು, ಬರ್ತಾಬರ್ತಾ ಅಭ್ಯಾಸಬಲದಿಂದ ಎಲ್ಲವೂ ಸರಿಹೋಗತ್ತೆ.

ಗೌಡ—ಹಾಗಾದ್ರೆ ಈವರೆಗೆ ಆ ಕಾಲೇಜಿನ ಗುಡ್ಡಕ್ಕೆ ಕಲ್ಲು ಹೊತ್ತ ಉದ್ದೇಶ್ಯ ಏನು ? ಇಲ್ಲೇ ರೆಂಟೇ ಹೊಡೀತಾ ಬಿದ್ದಿರಬಹುದಿತ್ತಲ್ಲಾ !

ರಾಮಯ್ಯ—ಅದ್ರಿಂದ಼್ೂ ಉಪಯೋಗವಿದೆಯೆಪ್ಪಾ. ನನ್ನ ಬುದ್ಧಿಶಕ್ತಿ ಹೆಚ್ಚಿದೆ, ಪರರ ಸುಖ ಕಷ್ಟ, ಜಗತ್ತಿನ ತೊಂದರೆ ನನಗೆ ಗೊತ್ತಾಗಿದೆ. ಬೇರೆ ಕಡೆಯ ಮತ್ತು ನಮ್ಮಲ್ಲಿಯ ರೈತಬಂಧುಗಳ ತಾರತಮ್ಯ ನನ್ನ ಮನಸ್ಸಿಗೆ ಖಚಿತವಾಗಿದೆ. ಹಳ್ಳಿಗರ ಉದ್ಧಾರಕ್ಕಿರುವ ಕುಂದುಕೊರತೆಗಳು ನನ್ನ ಮುಂದಟ್ಟಾಗಿವೆ. ಇವೆಲ್ಲವನ್ನೂ ಸರಿಪಡಿಸಿ ಹಳ್ಳಿಗಳ ಪುನರುಜ್ಜೀವನಗೊಳಿಸುವ ಮಾರ್ಗವು ನನಗೆ ಮನವರಿಕೆಯಾಗಿದೆ. ಇದಕ್ಕಿಂತಲೂ ಹೆಚ್ಚಿಗೆ ನನಗೇನು ಬೇಕಪ್ಪಾ ? ಆದ್ದರಿಂದಲೇ ಇನ್ನು ಮೇಲೆ ನಾನು ಈ ನಮ್ಮ ಆಜನ್ಮಸಿದ್ಧವಾದ ರೈತಾಪಿ ಕೆಲಸಕ್ಕೆ ಇಳಿದರೂ ಬಿಡುವಿದ್ದಾಗಲೆಲ್ಲ ನಮ್ಮ ಹಳ್ಳಿಗರ ಶ್ರೇಯಸ್ಸಿಗಾಗಿಯೇ ದುಡಿಯುತಕ್ಕವನು.

ಗೌಡ—ವ್ಹಾ ! ವ್ಹಾ ! ವ್ಹಾ ! ಕಷ್ಟಪಟ್ಟು ಏನು ಓದ್ದೆ ಅಯ್ಯಾ ! ನಾನು ನನ್ನ ಮನಸ್ಸಿನಲ್ಲಿ ನನ್ನ ಮಗ ಓದೀ ಲಾಯರಾಗ್ತಾನೆ, ಶಿರಸ್ತಾರಕೀ ಮಾಡ್ತಾನೆ, ಅಮಲ್ದಾರಕೀ ನೋಡ್ತಾನೇ ಅಂತ ಮಹತ್ತರವಾದ ಆಶೇ ಇಟ್ಕೊಂಡಿದ್ರೆ ನೀನದನ್ನೆಲ್ಲಾ ನೀರಿನಲ್ಲಿ ಹೋಮಾ ಮಾಡಿ ಈ ಹೊಲ್ದ ಕೊಳಚೇಗಿಳ್ದಿಯಲ್ಲಯ್ಯಾ ! ಅಧಿಕಾರ ನಡ್ಸೋ ಭಾಗ್ಯದ ಕೈಲಿ ಮುರ್ಕು ಗುದ್ಲೀ ಹಿಡೀಲಿಕ್ಕೆ ಹೊರ್ಟೆಯಲ್ಲಯ್ಯಾ !

ರಾಮಯ್ಯ—ಅಪ್ಪಾ ! ನಾನು ಇಳಿದದ್ದು ಹೊಲ್ದ ಕೊಳ್ಚೇಗಲ್ಲ, ಭರತಖಂಡದ ನಲವತ್ತು ಕೋಟಿ ಪ್ರಜೆಗಳ ಜೀವನ ನಿರ್ವಾಹಕ್ಕೆ ಅತ್ಯಗತ್ಯವಾದ ಒಂದು ತುತ್ತನ್ನು ಕೊಡುವ ಭೂಮಿಯ ಕಣಜಕ್ಕೆ ! ನಾನು ಕೈಯಲ್ಲಿ ಹಿಡಿದುದು ಮುರುಕು ಗುದ್ದಲಿಯಲ್ಲ-ಹರಕು ಹೊಟ್ಟೆಯಿಂದ ನರಳುವ ಬಡವರ ಕರಳಿನ ಕೂಗನ್ನು ಕೇಳಿಯೂ ಒಂದು ಹಿಡಿ ಅನ್ನವನ್ನವರಿಗೆ ನೀಡದೇ ಕಿವುಡರಾಗಿ ಸರ್ವಸ್ವವೂ ತಮ್ಮದೇ ಎಂದು ಬಡವರ ರಕ್ತವನ್ನು ಹಿಂಡಿ ತುಂಬಿಸಿಟ್ಟ ಸ್ವಾರ್ಥೀ ಶ್ರೀಮಂತರ ಬೊಕ್ಕಸವನ್ನು ಒಡೆಯುವ ಚಿಮ್ಮಟಿಗ. ಅಪ್ಪಾ ! ಇಂತಹ ಮಹತ್ಕಾರ್ಯಕ್ಕೆ ಇಳಿದ ನನ್ನ ಸೇವೆಯನ್ನು - ಮಹತ್ಪದವಿಯನ್ನು ಓರ್ವ ಸಾಮಾನ್ಯ ಅಧಿಕಾರಿಯ ಸ್ಥಾನಕ್ಕಿಂತಲೂ ತುಚ್ಛವೆನಿಸಿದೆಯಾ ?

ಗೌಡ—ಬೇಡ ರಾಮಯ್ಯ-ಬೇಡ. ನೀನು ಓದೋದೂ ಬೇಡ, ನೌಕರೀ ನೋಡೋದೂ ಬೇಡ. ಸುಮ್ಮಕೇ ಊರಲ್ಲಿ ಹೀಗೆಲ್ಲಾ ಹರಟೇ ನನ್ನ ತಲೇಗೊಂದು ಅಪ್ವಾದ ಸುತ್ತಬೇಡ. ನೀನು ಬೇಕಾದ ಹಾಗೆ ಇರು, ಬೇಕುಬೇಕಾದಂತೆ ಕುಣಿ, ನನ್ದೇನೂ ತಡೆ ಇಲ್ಲ ನಿನಗೆ. ಇನ್ನೂ ಸಮ್ಯ ಇದೆ, ಚೆನ್ನಾಗಿ ಯೋಚ್ಸಿ ಕಾರ್ಯ ಮಾಡು. (ಹೋಗುವನು)

ತಿಮ್ಮ—ಸಣ್ಣ ಗೌಡ್ರೆ ! ನಾನೆಲ್ಲಿ ಅಪ್ನೋರು ನಿಮ್ಮನ್ನ ಮನೆಯಿಂದಲೇ ಹೊರಹಾಕ್ತಾರೋ ಅಂತಿದ್ದೆ. ಏನ್ರಪ್ಪಾ ಇದೂ-ನಿಮ್ಮಪ್ಪ ಮಕ್ಳ ವಾದ ! ಅಲ್ಲಾ ಗೌಡ್ರೇ, ಸತ್ಯ ಹೇಳ್ರಿ, ನೀವು ಬೇಸಾಯ್ದ ಕಸಬೀಗೆ ಇಳಿಯೋದು ನಿಜ್ವೇನು ?

ರಾಮಯ್ಯ—ತಿಮ್ಮಣ್ಣಾ ! ನಿಜ, ಪೂರ್ಣ ನಿಜ, ಇದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ನನ್ನಾ ರೈತಬಂಧುಗಳು ದೀನತೆಯಿಂದ ನನ್ನ ಕಡೇಗೇ ನೋಡುತ್ತಿರುವಾಗ, ಅಹರ್ನಿಶ ಅವರ ಮೇಲೆ ದುಃಸ್ಸಾಧ್ಯವಾದ ಅಪ ಕೃತಿಗಳು ನಡೆಯುತ್ತಿರುವಾಗ ನಾನು ಮಾತ್ರ ಪಟ್ಟಣದ ಭೋಗ ಭಾಗ್ಯದ ವಿಲಾಸದಲ್ಲಿ ಮೈಮರೆತಿರಲೇನೋ ? ಇಲ್ಲ. ತಿಮ್ಮಣ್ಣಾ ! ನನ್ನಿಂದದು ಎಷ್ಟಕ್ಕೂ ಶಕ್ಯವಿಲ್ಲ ಅವರ ಹೃದಯವಿದ್ರಾವಕ ಅವರ್ಣ ನೀಯ ಚಿತ್ರವು ನನ್ನ ಕಣ್ಣಿಗೆ ಕಟ್ಟಿದೆ.

ರಾಗ-ಮೀಯಾಮಲ್ಹಾರ-ತ್ರಿತಾಲ

ಭಾರತಾಂಬೆಯಾ-ಕರುಳಿನ ಮೊರೆ ಕೇಳುತಿದೆ ಸೇವಕಗೆ ॥ ಪ ॥
ಮರುಗುತ ತೋರುವಳೋ ಸುತರನೇ ।
ಹಸಿದೊಡಲಿಂದಿಹ ಸೋದರರಾ ಸ್ತೋಮಾ ॥
ವಸನಿಲ್ಲದಿಹಾ ಬೆತ್ತಲೆ ಮೈಲೇ ನರಳುತಲಿಹರೋ ।
ಆಶೆಲಿ ಕಾಯುಲು ಮಾತೆ ಕರೆವಳೋ ॥ ೧ ॥

[ ತೆರೆ ಬೀಳುವುದು ]

# ಅಂಕ ೩

## ನೋಟ ೧

[ ಶಿವಗ್ರಾಮದ ಒಂದು ಬೀದಿ. ಮಾದಿಗರ ಮಾದನು ಡಂಗುರ ಹೊಡೆಯುತ್ತಲಿರುವನು]

ಮಾದ—(ಹಲಗೆಯನ್ನು ಹೊಡೆದು ನಿಲ್ಲಿಸಿ) ಏನ್ರಪ್ಪೋ! ನಾಳೆಯಿಂದ ಕಂದಾಯ ತಂದಕೊಡ್ರಪ್ಪಾ.... ಕಂದಾಯಾ !

ಒಂದನೆಯವ—(ಪ್ರವೇಶಿಸಿ) ಏನೋ ಮಾದಾ ಅದೂ ?

ಮಾದ—ಕಂದಾಯರಪ್ಪಾ—ಕಂದಾಯ. ನಾಳೆಯಿಂದ್ಲೇ ವಸೂಲಿ ಕಾಣ್ರಪ್ಪಾ. ಬೇಗ ಬೇಗ ತಂದುಕೊಟ್ಬಿಡ್ರಿ ನನ್ನೊಡ್ಯಾ.

ಎರಡನೆಯವ—ಆಗಲೇ ಬಂದುಬಿಡ್ತೇನು ನಿಮ್ಮ ಕಂದಾಯದ ಕೂಗು ? .. ಏನಪ್ಪಾ ಇದೂ !

ಮಾದ—ಈ ವರ್ಸಾ ಏನ್ರಪ್ಪಾ ಗೋಳು ಕಂದಾಯ ಕೊಡೋಕೆ ? ಕ್ವೈ ತುಂಬಾ ಬೆಳ್ಕೊಂಡೀರಿ .... ಕೊಟ್ರಾತು !

ಒಂದನೇಯವ—ಬೆಳ್ದದ್ದ ಸರೀ ಕಾಣೋ ಮಾದ. ಆದರೆ ಕ್ರಯ ಮಾತ್ರ ನಾವೆಣಿಸಿದಂತೆ ಬಂದೇ ಇಲ್ಲ .... ಎಲ್ಲಾ ಮೇಲ್ಕೆಳಗಾಗಿ ಹೋತು ! (ಹೋಗುವರು)

ಮಾದ—ನಿಮ್ಮದು ಯಾವಾಗ್ಲೂ ಗೋಳುಂಟೇ ಉಂಟ್ರಪ್ಪ. (ಪುನಃ ಹಲಗೆ ಹೊಡೆದು ಮೊದಲಿನಂತೆಯೇ ಕೂಗುವನು.)

ಸಂಕಪ್ಪ—(ಪ್ರವೇಶಿಸಿ) ಇದೇನಪ್ಪಾ .... ನಿನ್ನ ಕೂಗಾಟ ಶುರುವಾಯ್ತು ಮಾದಾ ? ಮತ್ತೇನ್ತಂದ್ಯೋ ನಮ್ಮ ತಲೀಮ್ಯಾಲೆ ?

ಮಾದ—ಏನ್ ತರಲ್ರಪ್ಪಾ ನಾನು ನಿಮ್ಮೇಲೆ ! ಸರ್ಕಾರದ ಕಂದಾಯಕ್ಕೆ ಕೂಗ್ದೆ ಕಾಣ್ರಪ್ಪಾ. ನಾಳೇನೇ ವಸೂಲಿಗೆ ಪ್ರಾರಂಭಾ ಅಂತೆ. ಸಂಕಪ್ನೋರೇ ! ಈ ವರ್ಸ ಕಳೆದ ವರ್ಸ್ದಂಗ ಮಾಡ್ಕೋಬ್ಯಾಡ್ರಿ ; ಬ್ಯಾಗ್ ಎಲ್ಲಾ ಕೊಟ್ಟೊ ತಲೇ ಒಂದ್ ತೊಳ್ಕಂಡ್ಬಿಡ್ರಿ. ಬರ್ತೇನೊಡ್ಯಾ. (ಪುನಃ ಮೊವಲಿನಂತೆಯೇ ಹೊಡೆಯುತ್ತ ಕೂಗುತ್ತ ಹೋಗುವನು.)

ಸಂಕಪ್ಪ—ಮತ್ತೆ ಪ್ರಾರಂಭ ಕಂದಾಯಕ್ಕೆ ಇನ್ನು ಹೊರಡಬೇಕೂ ನಾಳೆ ಪುಣ್ಯಾತ್ಮರ ಹತ್ರ ಸಾಲಕ್ಕೆ ! ಕಳ್ದ ವರ್ಸದ ಕಂದಾಯ್ದ ಬಾಕೀಗೆ ಬೆಳ್ದ ಕಾಳೆಲ್ಲಾ ಲೂಟಿಯಾಗಿ ಇನ್ನೂ ತಿಂಗಳು ಕಳೀಲಿಲ್ಲ, ಆಗಲೇ ಪ್ರಾರಂಭ ಈ ಹೊಸ ಕಂದಾಯಕ್ಕೆ ! ಇನ್ನು ಯಾರು ಸಾಲಾ ಕೊಡ್ತಾರಪ್ಪಾ ನಮಗೆ....ಯಾರ ಕೈಕಾಲು ಕಟ್ಟಿಕೊಳ್ಳೀ ? ಕೇಣೀ ಬಾಕೀ ಕಾಳೀಗೆ ಹೊಲಾ ಸಿದ್ದಣ್ಣನ ಹೆಸ್ರೀಗೇ ದೀಡ್ ಬರ್ದಕೊಟ್ಟಿದ್ದಾಯ್ತು. ಇನ್ನು ಹೊಲಾ ಬೇಡ, ಮನೇ ಬೇಡ ಅಂತ ಈ ಹಾಳು ಜೋಪ್ಡೀಲಾದ್ರೂ ಇರೋಣಾ ಅಂತ ಊರ್ಬಿಟ್ಟು ಹಳ್ಳದ ಮೇಲಿನ ಗುಡ್ಸಲು ಸೇರಿದ್ರೂ ಈ ಪ್ರಾರಬ್ಧ ಗಂಟುಬಿಟ್ಟಿಲ್ಲಾ ನಮ್ಗೆ ! ಕಂದಾಯ.... ಕಂದಾಯ....ಕಂದಾಯ ! ಊಟಕ್ಕೆ ತಿನ್ನೋ ಕಾಳೀಗೆ ಸಾಲಾ; ಮಾನಾ ಮುಚ್ಕೋ ಅರ್ವೀಗೆ ಸಾಲಾ; ಈಗ ಸರ್ಕಾರಕ್ಕೊಡೋ ಕಂದಾಯಕ್ಕೂ ಸಾಲ್ವೇ ! ಸಾಲಾ ! ಸಾಲಾ !! ಸಾಲಾ !!! ರೈತಸೀಗೆಷ್ಟಿದ್ರೂ ಸಾಲಾ; ಕೊನೇಗವನಿಗುಳಿಯೋದೂ ಈ ಸಾಲ್ವೇ ! ಮೈ ಹುಣ್ಣಾಗೋ ವರೆಗೆ ದುಡ್ದು ಕಡೆಯಲ್ಲಿ ಸಿಕ್ಕತಕ್ಕ ಭಾಗ್ಯ ಇದೇ ನಮ್ಗೆ. ಮತ್ತೇ ರೈತ ಪುಣ್ಯಾತ್ಮನಂತೆ....ಅಂವ ಮಾಡೋ ಕೆಲ್ಸ ಪುಣ್ಯದ ಕೆಲ್ಸವಂತೆ... ಶಿವ ಶಿವಾ ! ಹೊಟ್ಟೆ ತುಂಬ ಊಟಕ್ಕಿಲ್ದೆ ಉಪವಾಸ ಸಾಯುವ ಈ ರೈತ್ನ ಪುಣ್ಯವನ್ನ ಕಟ್ಟಿಕೊಂಡು ಯಾರಿಗೆ ತೃಪ್ತಿಯಾಗ್ಬೇಕು ? ಅದೆಂತಾ ಪುಣ್ಯವೋ....ಅದೆಂತಾ ಪಾಪ್ವೋ ! ಸ್ವರ್ಗವಂತೆ – ನರಕವಂತೆ .... ಪರಮೇಶ್ವರಾ ! ಕಾಣದ ಆ ದೂರದ ಸ್ವರ್ಗದ ಆಶೆಯನ್ನ ತೋರಿ ಈ ಬಡಪಾಯಿಗಳನ್ನೇಕೆ ನೀನು ಹಿಂಸಿಸುತ್ತಿರುವೆ ? ಇಂದು ಊಟಕ್ಕಿಲ್ಲದೇ ಉಪವಾಸ ನರಳುವ ಈ ನರಕದಲ್ಲಿ ನಾಳಿನ ಆ ಸ್ವರ್ಗಸುಖ

ವನ್ನು ತೋರಿಸಿ ಪೀಡಿಸುತ್ತಿರುವೆಯೇಕೆ? ಮಹದೇವಾ! ಈಗ ಹಸಿವೆಯಿಂದ ಸಾಯುತ್ತಿರುವ ಈ ಕಂಗಾಲರಿಗೆ ಒಂದು ತುತ್ತು ಅನ್ನವನ್ನು ಕೊಡು, ಅದೇ ಸಾಕು. ಬೇಡ ಆ ನಿನ್ನ ಸುಟ್ಟ ಸ್ವರ್ಗ! (ಹೋಗುವನು)

[ತೆರೆ ಮೇಲಕ್ಕೇರುವುದು]

## ನೋಟ ೨

[ ಸಂಕಪ್ಪನ ಮನೆ. ಸಂಕಪ್ಪನು ಹಾಸಿಗೆ ಹಿಡಿದು ಮಲಗಿರುವನು. ತಲೆಯ ದಿಸೆಯಲ್ಲಿ ಗಂಗವ್ವನು ಶುಶ್ರೂಷೆ ಮಾಡುತ್ತಿರುವಳು.]

ಗಂಗವ್ವ—(ಸ್ವ) ಓಹೋ-ಅಪ್ಪಗೆ ಸ್ವಲ್ಪ ನಿದ್ದೆ ಹತ್ತಿದಹಾಗಿದೆ. ಆಗಲಿ. ಬೇಗೊಂದು ಅಡಿಗೆ ಕೆಲಸವನ್ನ ತೀರ್ಸಿಬಿಡ್ತೇನೆ ನಾನು. (ಹೋಗುವಳು)

(ತೆರೆಯಲ್ಲಿ ಮಾದನು ಹಲಗೆಯನ್ನು ಹೊಡೆದು ಮೊದಲಿನಂತೆಯೇ ಕೂಗುವನು.)

ಗಂಗವ್ವ—(ಪ್ರವೇಶಿಸಿ) ಹಾಂ-ಕಂದಾಯ್ದ ತಗಾದೆ. ಆಗಲೇ ಮೂರು ಕಂತು ಕಳೆದುಹೋಯ್ತು. ಇದು ಕೊನೇದು. ಅಪ್ಪ ಇದನ್ನ ಕೇಳಿದರೆ ಎಷ್ಟು ನೊಂದಕೋತಾನೋ ಏನೋ? ಇರಲಿ, ಎಚ್ಚರಾಗಿಲ್ಲ .... ದೇವರು ದೊಡ್ಡವನು.

(ಮಾದನು ತೆರೆಯಲ್ಲಿ ಮೊದಲಿನಂತೆಯೇ ಕೂಗಿಕೊಳ್ಳುವನು.
ಗಂಗವ್ವನು ಪುನಃ ಇಣಿಕಿನೋಡಿ ಹೋಗುವಳು)

ಸಂಕಪ್ಪ—(ಕಣ್ತೆರೆದು) ಗಂಗಾ! ಏನೇ ಅದೂ ಹಲ್ಗೆ ಹೊಡದ್ರಲ್ಲಾ. ಮಾದಿಗರ ಮಾದ್ನ ಸ್ವರ ಕೇಳ್ತಲ್ಲೇ .... ಏನ್ಕಾಗ್ದಾ ಅವ್ಕ?

ಗಂಗವ್ವ—ಇಲ್ಲಪ್ಪಾ, ಸರಿಯಾಗಿ ಕೇಳ್ಳಿಲ್ಲಾ ನಾನು. ಏನೋ ಗ್ರಾಮದ ಪಾಕೀಜು - ಸಾಹೇಬ್ರು ಬರ್ತಾರೇ ಅಂದ. ಏನಾದ್ರೂ ಇರ್ಬಹುದು-ಊರ ಕೆಲ್ಸಾ. ನಮಗ್ಯಾಕಪ್ಪಾ ಅದು-ನಾವು ಊರಲ್ಲಿದ್ದೀವೇನು?

ಸಂಕಪ್ಪ—ಗಂಗವ್ವಾ ! ನನ್ಮುಂದೂ ಸುಳ್ಹೇಳ್ತೀಯೇನೇ ? ನಿನ್ಗೆ ಕೇಳ್ಸಿರಲಿಕ್ಕಿಲ್ಲಾ ಅವ್ನ ಕೂಗು....ನನ್ಗೆ ಚೆನ್ನಾಗಿ ಕೇಳಸ್ತು ಕಾಣೆ. ಕೊನೇ ಕಿಸ್ತೂ-ಕಂದಾಯ ಬೇಬಾಕಿ ಮಾಡ್ಬೇಕೂ ಅಂದ್ನಲ್ಲೇ.

ಗಂಗವ್ವ—ಹೌದಪ್ಪಾ, ಅದು ನಾಳೆಯ ಕಥೆ. ಅದನ್ನ ಕಟ್ಕೊಂಡು ಇಂದ್ಯಾಕೆ ಅಳ್ಬೇಕು ನಾವು ? ನಾಳೆ ಶಿವನಿದ್ದಾನೆ, ನೀನು ಈಗ ಸುಖವಾಗಿ ಮಲಗಪ್ಪಾ.

ಸಂಕಪ್ಪ— ನಾಳೆ ಶಿವನಿದ್ದಾನೆ ! ಹೂಂ-ನಾಳೆ ಶಿವನಿದ್ದಾನೆ. ಗಂಗವ್ವಾ ! ಇಷ್ಟು ಕಷ್ಟದಲ್ಲೂ ನಿನ್ಗೆಷ್ಟು ಧೈರ್ಯವೇ ಅದೂ ? ನಿನ್ನಾ ಧೈರ್ಯ, ನಿನ್ನಾ ನಿಶ್ಚಯ ನನ್ನಿಗ್ಗಲ್ಲಲ್ಲೇ ! ಹೌದು ತಾಯಿ-ನಾಳೆ ಶಿವನಿದ್ದಾನೆ ನಮ್ಮಾಲೀಗೆ. ನಾನೀಗ ಮಲ್ಗತೇನೆ. (ಹೊದೆದುಕೊಳ್ಳುವನು. ಗಂಗವ್ವನು ಒಳಕ್ಕೆ ಹೊರಟುಹೋಗುವಳು. ಸಂಕಪ್ಪನು ಮುಸುಕು ತೆಗೆದು) (ಸ್ವ) ಶಿವನೆಲ್ಲಿದ್ದಾನೇ ಅವ್ವ .... ಎಲ್ಲಿದ್ದಾನೆ ಆ ನಿನ್ನ ಶಿವಾ ? ಶಿವ ಇಲ್ಲಿಲ್ಲಾ. ಅಗಾ ಗೌಡ ನಿಂತಿದ್ದಾನೆ ಅಲ್ಲೀ. ಗೌಡಾ... ಬೇಡ ಗೌಡಾ ! ನನ್ನ ಎತ್ತೂ ನೇಗ್ಲೂ ಹಿಡೀಬ್ಯಾಡ-ಕೊಡ್ತೇನೆ ನಿನ್ನ ಕಂದಾಯಾ. ಗೌಡ ! ಕೈಮುಗೀತೇನಪ್ಪಾ-ಬಿಡೂ ನನ್ನ ಎತ್ತನ್ನ.

(ಗಂಗೆಯೂ ಇನ್ನೊಂದು ಕಡೆಯಿಂದ ಚನ್ನನೂ ಓಡಿಬರುವರು.)

ಚನ್ನ—ಮಾವಾ ! ಮಾವಾ ! ಏನದು....ಏನಾಯ್ತು ? (ಹತ್ತಿರ ಕುಳಿತುಕೊಳ್ಳುವನು.)

ಗಂಗವ್ವ—ಆಂ-ಬಂದ್ರಾ ನೀವು ! ಸ್ವಲ್ಪ ನೋಡ್ಕೊಳ್ಳಿ, ನಾನಷ್ಟು ಬೇಗ ಪಥ್ಯ ಬೇಸ್ತೇನೆ. (ಹೋಗುವಳು)

ಸಂಕಪ್ಪ—(ಕಣ್ತೆರೆದು) ಚನ್ನಾ ! ಗೌಡ ಜಪ್ತೀಗೆ ತಂದನೇನು .... ಜಪ್ತು ಆಯ್ತೇನು ? ನನ್ನ ಎತ್ತನ್ನ ತಕ್ಕೊಂಡು ಹೋಗಿಯೇಬಿಟ್ಟನಾ ! ಇನ್ನ್ಹ್ಯಾಂಗಪ್ಪಾ ಬೇಸಾಯ ಮಾಡೋದೂ ?

ಚನ್ನ—ಮಾವಾ ! ಇದ್ಯಾಕ್ ಹೀಂಗ್ ಬಡಬಡ್ಸತಾ ಇದ್ದೀರಿ ನೀವು ? ಗೌಡ್ರೂ ಬಂದಿಲ್ಲಾ .... ಯಾರೂ ಬಂದಿಲ್ಲ .... ನೀವು ಸುಖವಾಗಿ ಮಲಗಿ. ನಿಮ್ಮ .... ಜ್ವರ ಒಂದು ಬಿಡ್ಲೂ ಅಂದ್ರೆ ಆ ಕಂದಾಯ ಕಟ್ಟೋದೆಷ್ಟು ಹೊತ್ತು ನಮ್ಗೆ ?

ಸಂಕಪ್ಪ—ಚೆನ್ನಾ ! ಹಾಗಾದ್ರೆ ನಾನು ಮಲ್ಗತೇನೆ........ಚನ್ನಾ – ಅಯ್ಯ ನೋರನ್ನಾ ಕರ್ಕೊಂಡ ಬಂದ್ಯೇನು ? ಏನಂದ್ರೋ ಅವ್ರು – ನಾನ್ಸಾ ಯ್ತೇನಂತ್ಲೋ–ಇರ್ತೇನಂತ್ಲೋ ?

ಚನ್ನ—ಅದ್ಯಾಕ ಸಾಯ್ಬೇಕು ಮಾವಾ ನೀವು ? ನಮ್ಮದ್ವೇ ನೋಡ್ದೇ .... ನಿಮ್ಮೊಮ್ಮಗನ್ನ ನೀವಾಡ್ಸದೇ ಸಾಯ್ತೀರೇನು ? ಇಲ್ಲ ಮಾವಾ .... ಅದೆಲ್ಲಾ ನಿಮ್ಮ ಹುಚ್ಚು ! ನಾನು ಅಯ್ಯನೋರ ಮನೇಗೆ ಹೋಗಿದ್ದೆ. ಅವ್ರು ಇರಲಿಲ್ಲ, ಎಲ್ಲೋ ಹೋಗಿದ್ದಾರಂತೆ. ಬಂದ್ಕೂಡ್ಲೇ ಕಳ್ಸಬೇಕೂ ಅಂತ ಮನ್ಯೋರಿಗೆ ಹೇಳಿ ಬಂದಿದ್ದೇನೆ.

ಸಂಕಪ್ಪ—ಚೆನ್ನಾ ! ಹಾಗಾದ್ರೆ ಅವ್ರು ಬಂದಕೂಡ್ಲೇ ನನ್ನೆಚ್ಚರಿಸಿಬಿಡು. ನಾನೇ ಕೇಳ್ತೇನೆ ಅವ್ರನ್ನ, ಇದೇನ್ಸ್ಥೀಡೇ ಅಂತ. (ಕಣ್ಮುಚ್ಚಿ ಮಲಗುವನು.)

ಚನ್ನ—ಆಗ್ಲಿ ಮಾವಾ. (ಗಾಳಿ ಬೀಸುತ್ತ ಕುಳಿತುಕೊಳ್ಳುವನು.)

ಸಂಗಯ್ಯ—(ಪ್ರವೇಶಿಸಿ) ಓಹೋ – ಸಂಕಪ್ಪ ಹಾಸ್ಗಿಯೇ ಹಿಡ್ದುಬಿಟ್ಟಿದ್ದಾ ನೇನು ! ಎಷ್ಟು ದಿವ್ಸವ್ಯಾತೀಗ ?

ಚನ್ನ—(ಒಂದು ಮಣೆಯನ್ನು ತಂದಿರಿಸುವನು, ಅಯ್ಯನವರು ಕುಳಿತುಕೊಳ್ಳುವರು) ಈಗ ನಾಲ್ಕೈದು ದಿವ್ಸವ್ಯಾತು. ಹತ್ತಿದ ಜ್ವರ ಇಳ್ದೇ ಇಲ್ಲ. ಬಾಯ್ಗೆ ಬಂದಂತೆಲ್ಲಾ ಮಾತಾಡ್ತಾ ಇದ್ದಾರೆ. ಅದಕ್ಕೇ ಒಂದು ನಿಮಿತ್ಯಾ ನಾದ್ರೂ ಕೇಳೋಣಾ ಅಂತ ತಮ್ಮನೇಗೇ ಬಂದಿದ್ದೆ.

ಸಂಕಪ್ಪ—ಹಾಂ-ಹೌದು ಸ್ವಾಮಿಗಳೇ, ಚೆನ್ನಾಗಿ ನೋಡಿ ಹೇಳ್ರಿ....ನಾನೇ ನ್ಸಾಯ್ತೇನೋ ಇರ್ತೇನೋ ಅಂತ.

ಸಂಗಯ್ಯ—ಅಷ್ಟ್ಯಾಕೆ ಹೆದ್ರತೀ ಸಂಕಪ್ಪಾ ನೀನೂ ? ನೋಡೋಣ ....
ನಿಮಿತ್ಯ ಏನ್ಹೇಳ್ತದೇ ಅಂತ. (ಮನೆಯನ್ನು ಬರೆಯತೊಡಗುವನು)

ಗಂಗವ್ವ—ಇಡೀ ದಿನಾ ಹೀಂಗೆ ಬಾಯಿಗೆ ಬಂದ್ಹಾಂಗ ಮಾತಾಡ್ತಾ ಇರೋದೆ. ಒಂದಕ್ಕೂ ಅರ್ಥಾ ಇಲ್ಲಾ, ಸಂಬಂಧ ಇಲ್ಲಾ. ಆವಷ್ಟು ಚೆನ್ನಾಗಿ ನೋಡಿ ಹೇಳ್ರಿ ಸ್ವಾಮಿಗಳಾ !

ಸಂಗಯ್ಯ—(ಗಂಗವ್ವನ ಮುಖವನ್ನು ನೋಡುತ್ತಾ ಮನೆಯನ್ನು ಪೂಜಿಸಿ ಕವಡೆಯನ್ನು ಪೂಜಿಸಿಟ್ಟು) ಆಗಲೀ ಆಗಲೀ, ನೋಡೋಣ....ಏನೋ ಒಂದು ಪೀಡೆಯ ಶಖಾ ಇರ್ಬೇಕು ಅಂತ ತೋರತ್ತೆ ನನಗೆ. ಇಲ್ಲವಾದ್ರೆ ಈ ಹಲವಾಟಕ್ಕೆ ಕಾರಣ ಇರ್ಲಿಲ್ಲ. ಇರಲಿ, ಚೆನ್ನಾ ! ಏನಾದ್ರೂ ಕಾಣ್ಕೆ ಇಡು ನೋಡ್ವ.

ಚನ್ನ—ಆಗ್ಲಿ ಸ್ವಾಮಿಯೋರಾ. (ಸ್ವ) ಕಾಣ್ಕೇ ಇಡ್ಲಿಕ್ಕೆ ರೊಕ್ಕಾನಾದ್ರೂ ಇದ್ಯೆ–(ಪ್ರ) ಗಂಗೀ, ನಿನ್ನ ಹತ್ರ ಏನಾದ್ರೂ ಚಿಲ್ರೆ ಇದ್ಯೇನು ಕಾಣ್ಕೆ ಇಡಲಿಕ್ಕೆ ?

ಗಂಗವ್ವ—ನೋಡ್ತೇನೆ ನಿಲ್ಲೀ. (ಒಳಕ್ಕೆ ಓಡಿಹೋಗಿ ಬಂದು ಚನ್ನನ ಹತ್ತಿರ ಒಂದಾಣೆಯನ್ನು ಕೊಡುವಳು)

ಚನ್ನ—ಕಾಣ್ಕೆ ಎಲ್ಲಿಡಲೀ ಅಯ್ಯನೋರಾ ?

ಸಂಗಯ್ಯ—ಅಗಾ, ಅಲ್ಲೇ ಮುಂದಿಡು. ಗುರುಗಳಿಗೆ ನಮುಸ್ಕಾರ ಮಾಡಿ ದೇವ್ರ ಪ್ರಾರ್ಥನೆ ಮಾಡಿ ಇಟ್ಬಿಡು ನೋಡೋಣ. ಪ್ರಶ್ನೆ ಯಾರ ಬಗ್ಯೆ–ಸಂಕಪ್ನ ಬಗ್ಯೆ ಅಲ್ಲೇನು ?

ಚನ್ನ....ಹೌದ್ಬುದ್ದೀ. (ಕಾಣಿಕೆ ಇಟ್ಟು ನಮುಸ್ಕರಿಸಿ ನಿಲ್ಲುವನು)

ಸಂಗಯ್ಯ—(ದೇವರ ಪ್ರಾರ್ಥನೆ ಮಾಡಿ ಕವಡೆಯನ್ನು ಬಾಚಿಡುವನು) ಹಾಂ–ಇದೀಗ ಶನೀ ಉದಯ ಪ್ರಶ್ನೆ ಕಾಣಪ್ಪಾ. ಸಂಕಪ್ನಿಗೀಗ ಏಳೂವರೇ ರಾಷ್ಟ್ರದ ಶನೀ ಕಾಡ್ತಾ ಇದೆ. ಲಗ್ನದಲ್ಲಿ ಚಂದ್ರಾ, ಚಂದ್ರನ್ನ ಕೂಡಿದ ಶನೀ

ನೀಚಸ್ಥಾನದಲ್ಲಿರೋದ್ರಿಂದ ಬಹಳ ದೋಷ್ವೇ ಕಂಡುಬರ್ತದಪ್ಪಾ. ಆದ್ರೂ ಸಧ್ಯ ಪ್ರಾಣಕ್ಕೇನೂ ಅಪಾಯ ಇಲ್ಲಾ ಅನ್ನು. ತತ್ರಾಪೀ ಬಹಳ ದೇಹ ಶ್ರಮಾ-ಕಷ್ಟಸಿಷ್ಠುರ ಮಾತ್ರ ತಪ್ಪಿದ್ದಲ್ಲ. ಅದಿರ್ಲೀ ಚನ್ನಾ - ಹಿಂದೆ ನಿಮ್ಮ ಕುಟುಂಬದಲ್ಲಿ ಯಾರಾದ್ರೂ ಕಾಯ್ಲೇಯಿಂದ ನರಳೀ ನರಳೀ ಸತ್ತದ್ದುಂಟೇನು ?

ಚನ್ನ— ನಂಗೊತ್ತಿಲ್ಲ ಸ್ವಾಮೀ; ಎಷ್ಟು ವರ್ಷದಿಂದೀಚೆಗೆ ?

ಸಂಗಯ್ಯ— ಬಹಳ ವರ್ಷವೇನೂ ಆಗಿಲ್ಲಾ ನೋಡು, ಒಂದು ಹತ್ತಿಪ್ಪತ್ತೈದು ವರ್ಷಗಳೊಳಗೆ.

ಸಂಕಪ್ಪ—ಹಾಂ-ಹೌದು. ನನ್ನ ತಮ್ಮೊಬ್ಬ ಕಾಯಿಲೇಯಿಂದ ಸತ್ತಿದ್ದ.

ಸಂಗಯ್ಯ— ನೋಡು-ಅದನ್ನೇ ಈ ಪ್ರಶ್ನೆ ಹೇಳ್ತಾ ಇದೆ. ಆತನೀಗೆ ಮುಕ್ತಿ ಆಗಲಿಲ್ಲ. ಅವನು ಯಾವಾಗ್ಲೂ ತನಗೊಂದು ಸ್ಥಾನಾ ತೋರ್ಸು.... ಸ್ಥಾನಾ ತೋರ್ಸು ಅಂತ ಪೀಡಸ್ತಾ ಇದಾನೆ. ಅದನ್ನೊಂದು ಜೇಗ ನೀವು ಸರಿಮಾಡ್ಕೋಬೇಕು.

ಸಂಕಪ್ಪ— ಅವನೀಗೆ ಮಾಡ್ಬೇಕಾದ ಎಲ್ಲಾ ಕರ್ಮ್ಮೇನೂ ನಾವು ನಿಮ್ಮ ಯಜಮಾನ್ರಿಂದಲೇ ಮಾಡ್ಸಿದ್ದೇವೆ.

ಸಂಗಯ್ಯ—ಊಂ-ಹೂಂ... ಸರಿಯಾಗಿಲ್ಲಾ ಅದೂ. ಅದರಿಂದ ಆತನೀಗೆ ತೃಪ್ತಿ ಉಂಟಾಗಿಲ್ಲಾ. ಇರಲೀ, ನಿಮ್ಮನೇ ಆಚೇಕಡೆ ಒಂದು ನಾಗ ಪ್ರತಿಷ್ಠೆ ಮಾಡ್ಸಿದ್ದುಂಟೇನು ?

ಚನ್ನ— ನಾಗ್ನ ಪ್ರತಿಷ್ಠೆ ಇಲ್ಲ.

ಸಂಗಯ್ಯ— ಒಂದು ಹುತ್ತಾ ?

ಸಂಕಪ್ಪ—ಅದು ಇಲ್ಲಿಲ್ಲ. ಹಿಂದಿನ ಮನೇ ಹತ್ರ ಇತ್ತು, ಅದೀಗ ಸಾಹ್ಕಾರ್ರ ವಶಾ ಇದೆ.

ಸಂಗಯ್ಯ—ಹಿಂದಿನ ಮನೇ ಆದ್ರೇನು - ಈಗಿನದಾದ್ರೇನು ? ಅವೇನು ನಿಮ್ಮದಲ್ಲವೇನು ? ನೋಡೀ, ಅದರ ಶುದ್ಧಾಚಾರ ಸರಿಯಾಗಿಲ್ಲಾ. ನೀವದಕ್ಕೆ ಸರಿಯಾಗಿ ನಡ್ಕೊಳ್ಳತಾ ಇಲ್ಲಾ. ಅದೀಗ ಈ ಪೀಡೇ ಜತೇಲ್ಸೇರಕೊಂಡು ಮಧ್ಯೆ ಮಧ್ಯೆ ಬಾಧೆ ಕೊಡ್ತಾ ಇದೆ.

ಚನ್ನ—....ಹಾಗಾದ್ರ ಏನ್ಮಾಡಬೇಕಂತೀರೀಗ ? ಈಗ ನಾವು ಕೈ ಮುಚ್ಚ ಕೂತಿದ್ದೇವೆ. ಹೆಚ್ಚೇನೂ ನಡ್ಕೊಳ್ಳೋ ಸ್ಥಿತೀಲಿಲ್ಲಾ........ಆದ್ರಿಂಪ ತಾವೇ ಒಂದು ತಹಬಂದು ಮಾಡಿದ್ರೆ ಆಗ್ತಾ ಇತ್ತು.

ಸಂಗಯ್ಯ—ಹಾಂ–ಅದಕ್ಕೇನಂತೆ ? ಬೇಗ ಒಂದು ನಾಲ್ಕು ನೇರು ಅಕ್ಕೀ, ಒಂದು ನಾಲ್ಕು ಮೊಳ್ದ ಬಟ್ಟೇ ಚೌಕ, ಜೇಳೆ, ತುಪ್ಪ, ಬೆಲ್ಲಾ ಇವೆಲ್ಲಾ ಗೊತ್ತುಂಟಲ್ಲಾ, ಇವನ್ನಷ್ಟು ಮನೇಗೆ ಕಳ್ಸಿಕೊಟ್ಟುಬಿಡು. ಒಂದು ತೆಂಗಿನಕಾಯಿ ಮೇಲೆ ಆ ಅತಂತ್ರವಾಗಿ ಚಲ್ಸತಾ ಇರುವ ಪ್ರೇತವನ್ನ ಆವಾಹನೇ ಮಾಡಿ ನಿಮ್ಮನೇ ದೇವ್ರು ಭೈರಪ್ನ ಸ್ವಾಧೀನ ಪಡ್ಸ್ತೀನಿ. ಅವ್ನೂ ಕೂಡ ಅದನ್ನ ತನ್ನ ಸ್ವಾಧೀನ ತಕ್ಕೊಳ್ಳತಾನೆ–ನೀವ್ಯಾಕೆ ನನ್ನ ಮರತಿದ್ದೀರೀ ಅಂತ ಕೇಳ್ತಾ ಇದ್ದಾನೆ, ಬೇಕಾದ್ರೆ ಒಂದು ಉಗ್ರಾಣನೇನೂ ಬರ್ದುಕೊಡ್ತೀನೆ, ನನ್ನ ಹೆಸ್ರು ಹೇಳಿ ಕಟ್ಟಿಬಿಡಿ ರೋಗೀಗೆ. ನಾಲ್ಕು ದಿನ್ದಲ್ಲಿ ಎಲ್ಲಾ ಸರಿಯಾಗತ್ತೆ.

ಗಂಗವ್ವ—ಇನ್ನಾ ಹುತ್ತದ ನಾಗನಿಗೇನು ಮಾಡಬೇಕು ? ನಾವೀಗ ಆ ಮನೇ ಕಡೆ ಹೋಗೋಹಾಂಗಿಲ್ಲ, ಅದು ಸಾವ್ಕಾರ್ರೀಗೆ ಸೇರಿಹೋಯ್ತು.

ಸಂಗಯ್ಯ—ಒಂದು ಬಿಂದಿಗೆ ಆಕ್ಳ ಹಾಲನ್ನ ಮನೇಗೆ ಕಳ್ಸಿಬಿಡು: ಎಲ್ಲಾ ನಾನ್ಮಾಡ್ತೀನೆ, ನಿಮ್ಗಾ ಹೆದರಿಕೆಯೇ ಬೇಡ.

ಮುದ್ದಜ್ಜ—(ಹೊರಗಿನಿಂದ) ಯಾರ್ರಪ್ಪಾ ಒಳಗೇ ? ಚನ್ನಪ್ಪಾ! ಸಂಕಪ್ನವ್ರು ಏನ್ಮಾಡ್ತಾ ಇದ್ದಾರೆ ?

ಚನ್ನ—ಯಾರೂ....ಬಂದೆ ಬಂದೇ. (ಹೋಗುವನು)

ಸಂಗಯ್ಯ—(ಸ್ವ) ಇದ್ಯಾರು ? ಆ ಮುದ್ದಪ್ನ ಸ್ವರದ್ಹಾಂಗ ಕೇಳತ್ತಲ್ಲಪ್ಪಾ. ಇಂವ ಯಾಕೆ ಬಂದಾ ಮತ್ತಿಲ್ಲಿ ? (ನೋಡಿ) ಅವನೇ ಹೌದು, ಹಿಂದೆ ಸರ್ವಮಂಗಳಮ್ಮನೂ ಇದ್ದಾರೆ. ತವುರುಮನೇಗೆ ಹೋದವ್ರು ಇವ ರ್‍ಯಾವಾಗ ಬಂದ್ರಪ್ಪಾ ! (ತನ್ನ ಸಾಮಾನು ಸರಕುಗಳನ್ನು ಸರಸರನೆ ಕಟ್ಟಿ ಕೊಳ್ಳುವನು.)

(ಎಲ್ಲರೂ ಪ್ರವೇಶಿಸುವರು.)

ಸಂಗಯ್ಯ—(ಗಡಿಬಿಡಿಯಿಂದ) ಚನ್ನಾ ! ಅಷ್ಟು ಮಾಡಿಬಿಡು-ಬರ್‍ತೇನೆ ನಾನು. (ಹೋಗುವರು.)

ಸಂಕಪ್ಪ—ಅಯ್ಯನೋರೇ....

ಸಂಗಯ್ಯ— (ಹೋಗುತ್ತಾ) ಎಲ್ಲಾ ನಾಳೆ ಮಾತಾಡೋಣ; ಬರ್‍ತೇನೆ ಈಗ.

ಮುದ್ದಜ್ಜ—ಏನು ಸ್ವಾಮಿಗಳಾ ! ಹೊರ್‍ಟ್ಟೇಬಿಟ್ರೆಲ್ಲಾ....ಎಲ್ಲಾ ಮುಗೀತೇನು ತಮ್ಮದೂ ?

ಸಂಗಯ್ಯ—ಬಂದೆ-ಬಂದೆ-ಬಂದೆ-ಅಲ್ಲಿ ಸ್ವಲ್ಪ ಕೆಲ್ಸಾ ಇದೆ. (ಲಗುಬಗೆಯಿಂದ (ಹೋಗುವರು)

ಮುದ್ದಜ್ಜ—ಹಾಂ - ಹಾಂ - ಗೊತ್ತಾಯ್ತು .... ಗೊತ್ತಾಯ್ತು ದಯಮಾಡ್ಸಿ. ಸಂಕಣ್ಣಾ ! ಇವ್ರೋರು ಬಂದಿದ್ದಾರಪ್ಪಾ ನಿನ್ನನ್ನ ನೋಡಲಿಕ್ಕೆ.

ಸಂಕಪ್ಪ—ಅವರ್‍ಯಾಕ ಬಂದ್ರಪ್ಪಾ ಇಲ್ಲೀ....ಈ ಪಾಪೀ ಮನೇಗೆ ?

ಸರ್ವಮಂಗಳೆ—ಸಂಕಜ್ಜಾ ! ಹ್ಯಾಗಿದ್ರೆಪ್ಪಾ-ನಿಮ್ಮ ಆರೋಗ್ಯ ? ನಾನೀಗ ಎರಡು ಮೂರು ತಿಂಗಳಿಂದ್ಲೂ ಊರಲ್ಲಿರಲಿಲ್ಲ. ತವುರುಮನೇಗೆ ಹೋಗಿದ್ದೆ - ನಿನ್ನೇತಾನೆ ಬಂದೆ ಅಷ್ಟೆ. ನಮ್ಮ ಮುದ್ದಜ್ಜ ನಿನ್ನ ಅವಸ್ಥೇನೆಲ್ಲ ತಿಳ್ಸಿದ. ಹಾಗೇ ನೋಡಿ ಹೋಗೋಣಾ ಅಂತ ಬಂದೆ. ಛೇ - ಛೇ - ಪಾಪ್ವೇ ! ಹಾಸಿಗೇಗೆ ಹತ್ತಿಹೋಗ್ಬಿಟ್ಟಿದ್ದಿಯಲ್ಲಪ್ಪಾ ಸಂಕಜ್ಜಾ .... ಏನಾದ್ರೂ ಔಷಧ ತಕ್ಕೊಂಡಿದ್ದಿರೇನು ?

ಸಂಕವ್ವ—ನನಗ್ಯಾಕರವ್ವಾ ಔಷಧ–ನಾಳೆ ಸಾಯುವವನಿಗೆ? ನನಗವುಷಧ ಕೊಟ್ಟೇಬಿಟ್ಟಿದ್ದಾರೆ ನಿಮ್ಮ ಯಜಮಾನ್ರು–ಸಾಕವ್ವ ಅದೇ.

ಸರ್ವಮಂಗಳೆ—ತಾತಾ–ಅವ್ರದ್ದೊಂದು ಸ್ವಭಾವ, ನಿಮ್ಗೆ ಗೊತ್ತೇಇದೆ ಅದು. ಅದ್ಕೆ ನೀವೆಲ್ಲಾ ಬೇಸ್ರಪಟ್ರೆ ಆದೀತೇನು? ಚನ್ನಾಗಿ ನೋಡ್ಕೊಳ್ಳಿ; ಏನೂ ಭಯಪಡಬೇಕಾಗಿಲ್ಲ ಅವ್ರು; ಕೂಡ್ಲೇ ಗುಣ ಹೊಂದ್ತಾರೆ.

ಗಂಗವ್ವ—ಅಯ್ಯನೋರು ಬಂದು ಅದೇನೇನೋ ಕಟ್ಟು ಕಟ್ಳೇ ಮಾಡಬೇಕಂ ದ್ರವ್ವಾ. ಅಕ್ಕೀ, ಕಾಯೀ, ತುಪ್ಪಾ ಅಂತೇನೇನೋ ಸಾಮಾನಂದ್ರು. ಮನೇಲೊಂದೂ ಇಲ್ಲಾ. ಈಗ ಅವ್ರನ್ನ ನೋಡೋದಾ? ವೈದ್ಯರನ್ನ ನೋಡೋದಾ?

ಮುದ್ದಜ್ಜ—ತಾಯೀ–ನೀವೀಗ ಅಯ್ಯನೋರನ್ನ ಕಟ್ಕೊಂಡು ಕುಣೀಬ್ಯಾಡ್ರಿ. ಏನಾದರೊಂದು ಹೇಳೋದೇ ಅವ್ರ ಸ್ವಭಾವ. ರೋಗಕ್ಕೆ ತಕ್ಕ ಔಷಧ ಕೊಟ್ರೆ ಕಾಯಿಲೆ ಗುಣ ಆಗತ್ತೆ; ಅದಿಲ್ಲದೇ ಮಂತ್ರಕ್ಕೆ ಮಾವಿನ್ಕಾಯಿ ಉದ್ರತ್ತೇನವ್ವಾ?

ಸರ್ವಮಂಗಳೆ—ಆಂ–ಹಾಂ, ಬೇಡ ಬೇಡ–ಅದೂ ಆಗ್ಲಿ. ಶ್ರದ್ಧೆಗಿಂತ ಮುಂದೆ ದೇವರಿಲ್ಲ. ಹಳ್ಳಿಗರಲ್ಲಿ ಇದೊಂದು ನಂಬುಗೆ. ಅದನ್ನೂ ಹಾಳುಮಾಡ ಬಾರದು. ಚೆನ್ನಾ, ನೀವು ಹಣಕ್ಕಾಗಿ ವ್ಯಥೆಪಡಬೇಕಾಗಿಲ್ಲಾ–ಎಲ್ಲಾ ನಾನೇ ಕೊಡ್ತೇನೆ, ಏನು?

ಗಂಗವ್ವ—ಬ್ಯಾಡ್ರವ್ವಾ ನಿಮ್ಮ ಹಣಾ ನಮ್ಗೇ, ಅನಾವಶ್ಯಕ ತೊಂದ್ರೆ ಬೇಡ ನಿಮ್ಗೆ.

ಸರ್ವಮಂಗಳೆ—ಗಂಗವ್ವಾ! ನನ್ಗೆ ಗೊತ್ತಾಗತ್ತೇ ಇದ್ರ ಕಾರಣ. ಆದರೆ ಕೇಳು, ಇದು ಸಾಹುಕಾರ್ರು ಪ್ರೋನೋಟು ಬರ್ಸಕೊಂಡು ಕೊಡತಕ್ಕ ಹಣದಂತೆ ಅಂತ ತಿಳೀಬೇಡ. ನನ್ನ ಅಕ್ಕತಂಗಿಯರ, ನನ್ನ ದೀನಬಂಧು ಗಳ ಸೇವೆಗಾಗಿ ತೆಗೆದಿಟ್ಟ ಮುಡುಪಿದು. ನೀನು ಅನ್ಯಥಾ ಭಾವಿಸ ಬೇಡವ್ವಾ.

ಚನ್ನ—ಆಗಲೀ ತಾಯೀ, ಈಗ ಕೊಡ್ರಿ ಮುಂದದನ್ನ ತಿರುಗಿ ಮುಟ್ಸ್ತೀವೆ.

ಸರ್ವಮಂಗಳೆ—ಸಂಕಜ್ಜಾ, ಎಚ್ಚರದಿಂದಿರುವಿರೇನು ? ಕೇಳಿ, ನೀವು ಯಾವುದಕ್ಕೂ ಭಯಪಡಬೇಡಿರಿ. ನಿಮ್ಮ ರೋಗದ ಕಾರಣ ನನಗೆ ಗೊತ್ತದೆ, ನಿಮ್ಮ ಖಾಯಿಲೆಯ ಗುಟ್ಟನ್ನ ನಾನು ತಿಳ್ದಿದ್ದೇನೆ. ಇಗೊಳ್ಳಿ, ಮತ್ತೆ ನಾಳೆ ಸರ್ಕಾರದ ಕಂದಾಯ್ದ ಹಣಕ್ಕೆ ಬಂದ್ರು, ಗೌಡ್ರು ಜಪ್ತೀಗೆ ತರ ತಾರೊ ಏನೋ, ಹರಾಜ್‌ಮಾಡ್ತಾರೊ ಏನೋ ಅಂತ ಚಿಂತೆ ಹಚ್ಕೋಬ್ಯಾಡ್ರಿ. ಇದೋ, ನಿಮ್ಮ ಕಂದಾಯದ ಹಣದ ಬಗ್ಯೆ ತಗೊಳ್ಳಿ.

ಸಂಕಪ್ಪ....ಅವ್ವಾ-ಬೇಡ ಅವ್ವಾ. ಇದು ನಿಜವಾಗಿಯೂ ನಿಮ್ಮ ದೊಡ್ಡತನಾ ತೋರ್ಸತ್ತೆ. ಆದ್ರೆ ನಿಮ್ಮ ಋಣ್ದಲ್ಲಿ ನನ್ನನ್ನ ಕೆಡೀಬ್ಯಾಡ್ರಿ ನೀವು. ನಮ್ಮ ಮನೆಯಲ್ಲೊಂದು ಹಳೇ ತಪ್ಪೇಲೀ, ಹರಕು ಮುರಕು ಚೊಂಬು ಚರಿಗೇನೂ ಇದೆ. ಸಾಲದೇ ಇದ್ರೆ ಒಂದು ಕರೆಯುವ ಆಕಳೂ ಇದೆ. ಅದನ್ನೇ ಮಾರಾಟ ಮಾಡಿ ನಾನು ಈ ಸಲ್ದ ಕಂದಾಯ ಮುಟ್ಸತೇನೆ. ದಯವಿಟ್ಟು ನಿಮ್ಮ ಹಣ ಬ್ಯಾಡ್ರವ್ವಾ.

ಸರ್ವಮಂಗಳೆ—ಅದ್ಯಾಕಜ್ಜಾ ಇಷ್ಟು ಭಯಪಡ್ತೀರಿ ? ನನ್ನ ಮಾತಿನಲ್ಲಿ ಅಷ್ಟೂ ವಿಶ್ವಾಸ ಇಲ್ಲವೇನು ನಿಮಗೆ ?

ಮುದ್ದಜ್ಜ—ಸಂಕಜ್ಜಾ ! ಅವ್ಮಾವ್ರು ಕೊಡೋ ಹಣ ತಕ್ಕೊಳ್ಳಿಕ್ಕೆ ನೀನು ಭಯಪಡಬೇಡ ಕಣಪ್ಪಾ, ತಕೋ.

ಸಂಕಪ್ಪ....ಹೌದು ಮುದ್ದಜ್ಜಾ – ಅವ್ಮಾವ್ರು ದೊಡ್ಡವ್ರು. ಅವ್ರ ಗುಣಾ ದೊಡ್ದು. ಅವ್ರ ಮನ್ಸೂ ಧಾರಾಳ. ಆದ್ರೆ ಈ ವಿಷ್ಯ ಸಾವ್ಕಾರ್ರ ಕಿವೀಗೆ ಬಿತ್ತೂ ಅಂದ್ರೆ ಮಾತ್ರ ನನ್ನಿಂದಾಗಿ ಅವ್ರಿಗೂ ಸಂಕ್ಟ ತಪ್ಪಿದ್ದಲ್ಲ, ನಾನೂ ಉಳಿಯೋ ಹಾಂಗಿಲ್ಲಾ. ಆದ್ರಿಂದ ಬೇಡ ಕಣಪ್ಪಾ.

ಸರ್ವಮಂಗಳೆ—ಸಂಕಜ್ಜಾ ! ಇದು ಸಾವ್ಕಾರ್ರ ಹಣಾ ಅಲ್ಲ. ಅವ್ರ ಒಂದು ಬಿಡಿಗಾಸನ್ನೂ ನಾನು ನಿನ್ನ ಕೊರಲೀಗೆ ಕಟ್ಟೋದಿಲ್ಲ. ಇದು ನನ್ನ

ತವ್ರುಮನೆಯಿಂದ ನನಗೆ ಸಿಕ್ಕ ಪ್ರೇಮದುಡುಗೆರೆ. ಆದ್ರಿಂದ ನೀನೇನೂ ಅಂಜ್ಬೇಡ.

ಸಂಕಪ್ಪ—ಒಲ್ಲೆ ತಾಯೀ, ನಾನಿದನ್ನ ಎಷ್ಟಕ್ಕೂ ಒಲ್ಲೆ.

ಸರ್ವಮಂಗಳೆ—ಹಾಗಾದ್ರೆ ಹೀಗೆ ಮಾಡು – ಆ ನಿನ್ನ ಆಕ್ಳನ್ನ ನಾನು ತಕ್ಕೊಳ್ತೀನೆ, ಈ ರೂಪ್ಯಾ ನೀನ್ತಗೋ.

ಸಂಕಪ್ಪ—ಹಾಂ–ಅದಾಗ್ಬಹುದು ತಾಯೀ.

ಸರ್ವಮಂಗಳೆ—ಆದರೆ ನೋಡು ಒಂದು ವಿಚಾರಾ. ನೀನೀ ಆಕ್ಳನ್ನ ಬಹು ಪ್ರೇಮದಿಂದ ಸಾಕಿದ್ದೀ. ನಮ್ಮನೇಲಿ ಕೊಟ್ಗೇ ತುಂಬಾ ಆಕಳಿವೆ. ಅವುಗಳ ಜತೆಗೆ ಇದನ್ನೂ ಕಟ್ಟಿಕೊಂಡ್ರೆ ಇದೂ ಹಾಳಾಗಿಹೋದೀತು; ಆದ್ದರಿಂದ ಸಧ್ಯ ಇದು ಇಲ್ಲಿಯೇ ಇರಲಿ, ನನ್ನದಾಗಿಯೇ ನೀನಿದನ್ನ ಸಾಕಿಕೊಂಡಿರು. ಗಂಗವ್ವಾ, ನನ್ನ ಆಕಳನ್ನ ನೀನೇ ಸಾಕ್ತಾಯಿರು, ಆದೀತೇನು ?

ಗಂಗವ್ವ—ಅಪ್ಪ ಒಪ್ಪಿದ್ರೆ ಆದೀತು.

ಮುದ್ದಜ್ಜ—ಇನ್ನು ಅಪ್ಪ ಒಪ್ಪದೇ ಏನ್ಮಾಡ್ತಾನೆ ? ಅಮ್ಮಾವ್ರ ಮಾತೀಗೆ ಇಷ್ಟೂ ಬೇಡವೇನು ಬಿಡಿ !

ಸಂಕಪ್ಪ—ಆಗಲೀ, ನಿಮ್ಮ ಸಂತೋಷ. ಚನ್ನಾ, ಆ ಹಣ ತಕ್ಕೊಂಡು ಗೌಡ್ನ ಕಂದಾಯಾ ಕೊಟ್ಬಿಡಪ್ಪಾ.

ಚನ್ನ—ಆಗ್ಲಿ ಮಾವಾ. ತಾಯೀ, ಕೊಡ್ರವ್ವಾ ಇಲ್ಲೀ,

ಸರ್ವಮಂಗಳೆ—ಊಂ–ಹೂಂ–ನಾನಿದನ್ನ ಅಜ್ಜನ ಕೈಮೇಲೇ ಇಡಬೇಕಂತಿದ್ದೇನೆ. ಹಿಡೀರಜ್ಜಾ–ತಕೊಳ್ಳಿ. (ಕೊಟ್ಟು ಪಾದ ಹಿಡಿದು ನಮಸ್ಕರಿಸುವಳು)

ಸಂಕಪ್ಪ—ಇದೇನ್ರಮ್ಮಾ ಇದೂ ! ನಿಮ್ಮಂಥಾ ಮಾತಾಯಿ ನಮ್ಮ ಪಾಪಿಗಳ ಪಾದಾ ಮುಟ್ಬಾರ್ದು ತಾಯೀ – ಏಳ್ರಮ್ಮಾ–ಏಳ್ರಿ.

ಸರ್ವಮಂಗಳೆ—ಇಲ್ಲಜ್ಜಾ-ನಾನು ಏಳೋದಿಲ್ಲ. ನಮ್ಮ ಯಜಮಾನ್ರು ನಿಮ್ಗೆ ಬಹಳ ತೊಂದ್ರೆಕೊಟ್ರು. ನಿಮ್ಮಿಂದ್ಲೇ, ನಿಮ್ಮ ರೈತಬಂಧುಗಳ ಕಷ್ಟ ದಿಂದ್ಲೇ ನಮ್ಮನೆ ಬಹು ದಿವಸದಿಂದ ಬಾಳಿ ಬದುಕಿದೆ. ನಿಮ್ಮೀಗಿನ ಹೊಟ್ಟೇ ಉರಿಯೇ, ಒಡಲ ಶಾಪವೇ ನಮ್ಮನೆಯನ್ನ ಮುಂದಿಲ್ಲಾ ಅನ್ನೋ ಸ್ಥಿತಿಗೆ ತಂದಿಟ್ಟದೆ ಅಜ್ಜಾ-ನೀವು ಮಹಾ ತಪಸ್ವಿಗಳು, ಮಹಾ ಯೋಗಿಗಳು-ಕರ್ಮಯೋಗಿಗಳು. ನಿಮ್ಮ ಒಂದೊಂದು ಬಿಸಿಯುಸಿರೂ ನಮ್ಮ ಕುಲಕೋಟಿಯನ್ನ ಸುಟ್ಟು ಭಸ್ಮಮಾಡತ್ತೆ. ಅದ್ರಿಂದ ಹೇಳಜ್ಜಾ ನಮ್ಮವ್ರ ಮೇಲೆ, ನಮ್ಮನೇ ಮೇಲೆ ನಿಮ್ಮ ಯಾವ ಮನಸ್ತಾಪವೂ ಇಲ್ಲಾ ಅಂತ ಒಮ್ಮೆ ಹೇಳಜ್ಜಾ, ನಾನು ಸಂತೋಷದಿಂದ ಹೋಗ್ತೇನೆ.

ರಾಗ-ಧಾನೀ-ಖವಾಲೀ

ಸತಿಭಾಗ್ಯಾ ಘನ ವರವನೆ ಬೇಡುವೆ ನಾ ॥ ಧೃ ॥
ಆರುವ ಜ್ಯೋತಿಯ ನೀ ಕಾಯೋ
ಪ್ರೇಮದ ತೈಲವ ಮೋದದೊಳೆರೆದು ॥ ೧ ॥

ಸಂಕಪ್ಪ—ಇಲ್ಲ ತಾಯೀ, ನನ್ನ ಕಾಲು ಬಿಡ್ರಿ ನೀವು. ನಿಮ್ಮ ಪವಿತ್ರ ಹಸ್ತ ವನ್ನ ನನ್ನ ಪಾದಕ್ಕೆ ಸ್ಪರ್ಶಮಾಡಬಾರದವ್ವಾ. ನೀವು ಮನುಷ್ಯಮಾತ್ರ ರಲ್ಲಾ-ಮಹಾದೇವಿಯರವ್ವಾ. ತಾಯೀ, ನಾವು ಕರ್ಮಯೋಗಿಗಳಾದ್ರೆ ನಾವು ಮಾಡ್ತಿರೋ ತಪಸ್ಸು, ಯೋಗ, ಪೂಜೆ ಎಲ್ಲಾ ನಿಮ್ಮ ಸಂತೋಷ ಕ್ಕಾಗಿ ಅಮ್ಮಾ. ಅಂತಹುದರಲ್ಲಿ ನನ್ಗೆ ಮನಸ್ತಾಪ್ವೇ? ಇಲ್ಲ-ಎಳ್ಳಷ್ಟೂ ಇಲ್ಲ. ದೇವ್ರು ನಿಮ್ಗೆ ಕಲ್ಯಾಣವನ್ನ ಮಾಡ್ಲಿ. (ಹರಸುವನು)

ಸರ್ವಮಂಗಳೆ—ಈಗ ನನಗೆ ಸಂತೋಷವ್ಯಾತಜ್ಜಾ. ಚನ್ನಪ್ಪಾ-ನಿಮ್ಗೇ ನಾದ್ರೂ ಬೇಕಾದ್ರೆ ನನ್ಗೆ ಹೇಳಿಕಳ್ಸತಾಯಿರ್ತೀರೇನು ? ನಾನು ಪರ ಕೀಯಳಲ್ಲಾ – ನಿಮ್ಮವಳೇ.... ನೆನಪಿರಲಿ.

ಚನ್ನ—ಆಗ್ಲಿ ತಾಯೀ, ತಿಳ್ಸತೀನೆ.

ಮುದ್ದುಜ್ಜ—ಏನೇ ಗಂಗಕ್ಕಾ-ಅಡ್ಗಿ ಗಿಡ್ಗಿ ಆಯ್ತೇನು ? ಏನು ಮಾಡಿದ್ದೀ ಯವ್ವಾ ಉಣ್ಣೋಕೆ ?

ಸರ್ವಮಂಗಳೆ—ಗಂಗಮ್ಮಾ-ಮನೇ ಬಾಗ್ಲಿಗೆ ಬಂದವರನ್ನ ಹಾಗೇ ಕಳ್ಸತಾರೇನೇ ? ಒಂದಷ್ಟು ನೀಡಿಬಿಡು-ಬಹು ಹಸಿವಾಗತ್ತೆ ಕಾಣವ್ವಾ.

ಸಂಕಪ್ಪ—ಏನ್ನೀಡ್ತಾಳೆ ಅವ್ಳು ನಿಮ್ಗೆ. ಗಂಗಾ, ಬಡಸ್ತೀಯೇನೇ ಅವ್ರೋರಿಗೆ ?

(ಗಂಗವ್ವನು ತಲೆದೂಗುವಳು)

ಸರ್ವಮಂಗಳೆ—ಆಂ-ಹಾಂ-ಹೀಗೆ ಸುಮ್ನೆ ನಿದ್ರೆ ಕೇಳೋರಲ್ಲ ನಾವು, ನಿಮ್ಗೆ ಇದ್ದುದರಲ್ಲೇ ನಮ್ಗೂ ಒಂದು ಹಿಡಿ. ಎಲ್ರೂ ಸೇರಿಯೇ ಉಣ್ಣೋಣ.

ಚನ್ನ—ಆಗ್ಲಿ, ಮತ್ತೇಕೆ ತಡ ? ನಾಳೆ ಬೇಕಂದ್ರೆ ನೀವು ನಮ್ಮನೇಗೆ ಬಂದೀರ್‍ಯಾ ? ಏಳ್ರಿ, ಕೈಕಾಲ್ತೊಳಕೊಳ್ರಿ, ಒಳಗೆ ಹೋಗೋಣ.

ಸರ್ವಮಂಗಳೆ—ಓಹೋ-ಎಲ್ಲಾ ಪೂರೈಸಿಕೊಂಡೇ ಬಂದಿದ್ದೇವೆ. ಹಳ್ಳದ ದಂಡೆಯಲ್ಲೇ ಆಶ್ರಮ ಕಟ್ಕೊಂಡಿದ್ದೀರಿ. ಕೈಕಾಲು ತೊಳ್ಕೊಳ್ಳದೇ ನಾವು ಬರ್ತೇವೇನು ಒಳಗೆ ? ಊಟಾ ಒಳಗೆ ಬೇಡ, ಇಲ್ಲೇ ಅಜ್ಜನ ಇದ್ರಲ್ಲೇ ಆಗ್ಲಿ.

ಸಂಕಪ್ಪ....ಹೋಗೇ ಗಂಗಾ-ಯಾಕ್ನಾಚ್ಕೋತೀ ? ಇದ್ದದ್ದು ತಂದು ನೀಡು. ಬಡ್ವರ ಮನೇ ಊಟ ಗೊತ್ತೇ ಇದೆ ಲೋಕಕ್ಕೆ !

(ಗಂಗೆಯು ಒಳಕ್ಕೆ ಹೋಗುವಳು. ಎಲ್ಲರೂ ಕುಳಿತುಕೊಳ್ಳುವರು ಗಂಗೆಯು ಬಟ್ಟಲನ್ನಿಟ್ಟು ಎಲ್ಲರಿಗೂ ರೊಟ್ಟಿ-ಚಟ್ನಿಯನ್ನು ತಂದಿಡುವಳು.)

ಸರ್ವಮಂಗಳೆ—(ಸ್ವ) ಎಂಥಾ ಅನ್ಯಾಯ ಇದೂ ! ನಮ್ಮಲ್ಲಿ ಉಣ್ಣಲು ವಿಧ ವಿಧದ ಪಕ್ವಾನ್ನ ; ಇಲ್ಲಿ ಆರಿದ ಒಣಕು ರೊಟ್ಟಿ, ಖಾರದ ಹಿಂಡಿ. ನಮ್ಮಲ್ಲಿ ಕುಡಿಯಲು ಕಾಯಿಸಿ ಸಿದ್ಧವಾದ ಮಸಾಲೆ ಹಾಲು ; ಇಲ್ಲಿ ಹಳ್ಳದ ಜೌಗು ನೀರು, ಆಹಾ ! ಎಂತಹ ಪಕ್ಷಪಾತವಿದು !

ಮುದ್ದಜ್ಜ—ಬಹು ರುಚಿಯಾಗಿದೆ ಕಾಣವ್ವಾ ಚಟ್ನೀ, ನಾಲಿಗೇಲಿ ಹಾಂಗ್ ಹಾಂಗೇ ನೀರು ಸುರೀತಾ ಇದೆ.

## ಡಯಲಾಗ್

ಮುದ್ದಜ್ಜ—ಆಹಾ ಈ ಊಟಾ ಆನಂದವೇನೆಂಬೆ
ಮೃಷ್ಟಾನ್ನದೂಟಾ ||
ಗಂಗೆ—ಬಿಸಿಯಾರಿ ತಣಿದಿಹ ಒಣ ರೊಟ್ಟಿ ಚೂರು |
ರಸದೂಟವೆನ್ನುತೆ ಮಾತಿನ ದೂರ ||
ಸರ್ವಮಂಗಳೆ—ನೀ ಪ್ರೇಮದ ಹೃದಯದೆ ನೀಡಿಹ ತುಣುಕು |
ಆರುವ ಜೀವಕ್ಕೆ ಅಮೃತದ ಸೆಳಕು ||

[ ತೆರೆ ಬೀಳುವುದು ]

## ನೋಟ ೩

[ ಹೊಲವಲ್ಲಿಯ ಒಂದು ಹಾದಿ. ಸಂಗಯ್ಯನವರು ಹಿಂದೆ ಮುಂದೆ ನೋಡುತ್ತಾ ಪ್ರವೇಶಿಸುವರು.

ಸಂಗಯ್ಯ—(ಉಸಿರ್ಗರೆದು) ಪಾಪ ಇದ್ದಲ್ಲಿ ಭಯ ಅಂಬೋ ಮಾತು ಸುಳ್ಳಲ್ಲ, ನನ್ನಲ್ಲಿ ತಪ್ಪದೆ, ಅದಕ್ಕಾಗಿಯೇ ನನಗೆ ಹೆದರಿಕೆಯಾಗ್ತಾ ಇದೆ. ತೇಜಸ್ವಿಯ ಮುಂದೆ ದುರ್ವ್ಯಸನಿ ಎಷ್ಟಕ್ಕೂ ನಿಲ್ಲಲಾರ. ಆಚಾರವಂತನ ಮುಖವನ್ನ ಅನಾಚಾರಿ ಅರಗಳಿಗೆಯೂ ನೋಡಲಾರ. ನನಗೀಗ ಈ ಪರಮಪವಿತ್ರೆ-ನಿಷ್ಕಲ್ಮಷ ಹೃದಯದ ಸರ್ವಮಂಗಳಾದೇವಿಯವರನ್ನ ನೋಡೋದಂದ್ರೆ ಬೇಸಿಗೆಯಲ್ಲಿ ಪ್ರಜ್ವಲಿಸುತ್ತಾ ಇರುವ ಸೂರ್ಯನನ್ನ ನೋಡಿದಂತಾಗಿದೆ. ಎಂತಹ ಪಾಪಿ ನಾನು ಶ್ರೇಷ್ಠವಂಶದಲ್ಲಿ ಹುಟ್ಟಿ ಉತ್ತಮ ಸಂಸ್ಕಾರವಿದ್ದೂ ಅದನ್ನ ದುರುಪಯೋಗಪಡಿಸಿಕೊಳ್ಳುವ ನೀಚತನಕ್ಕೆ ಇಳಿದುಬಿಟ್ಟೆನಲ್ಲಾ ! ಧರ್ಮಗುರುಗಳೆನ್ನಿಸಿಕೊಂಡ ನಾವೇ ಈ ಅಡ್ಡದಾರಿಯನ್ನ ತುಳಿದೆವೆಂದರೆ ಇನ್ನು ಬೇರೆಯವರ ಗತಿಯೇನು ? ನಮ್ಮ ಸ್ಥಾನ ಜಗತ್ತಿನಲ್ಲಿ ಬಹು ಶ್ರೇಷ್ಠವಾದ್ದು, ಅತಿ ಪೂಜನೀಯವಾದ್ದು ಆದರೆ ನಾವೇ ಅದನ್ನ ಮರ್ರ್ತು ಅದರ ಮರೆಯಲ್ಲಿ ಗುಪ್ತ

ಅನಾಚಾರವನ್ನ ಮಾಡಲಿಕ್ಕೆ ತೊಡಗಿದೇವಂದ್ರೆ ಲೋಕವಾದ್ರೂ ನಮಗೇನಂದೀತು ? ನಮ್ಮಿಂದ ಗುರುಪರಂಪರೇಗೇ, ಉತ್ತಮ ವಿದ್ಯೆಗೇ ಲಾಂಛನ ಬಾರದೇ ಇದ್ದೀತೇ ? ನಿಜ ನಿಜ–ನಾನು ತುಳಿದುದು ತಪ್ಪು ಹಾದಿ, ಮಾಡಿದ್ದು ಮಹಾಪರಾಧ. ಸರ್ವಮಂಗಳಾದೇವಿಯವರ ಸ್ಥಾನದಲ್ಲಿ ಇನ್ನೊಬ್ಬರಿದ್ದಿದ್ದರೆ ನನ್ನ ಅವಸ್ಥೆ ಏನಾಗತಾ ಇತ್ತೋ ! ಆಗಲಿ, ಆದದ್ದಾಯ್ತು... ಇನ್ನಾದರೂ ನಾನು ನನ್ನ ಸ್ಥಾನದ ಬೆಲೆಯನ್ನ ತಿಳಕೊಂಡು, ವಿದ್ಯೆಯ ಮಹತ್ವವನ್ನರಿತು ನನ್ನ ಸ್ವಕರ್ತವ್ಯವನ್ನು ಮಾಡಿ ಆ ಮಹಾಗುರುಪರಂಪರೆಯ ಪೂಜ್ಯತೆಯನ್ನ ಕಾದು, ನಮ್ಮ ಅನುಯಾಯಿಗಳಿಗಾದ್ರೂ ಒಂದು ಆದರ್ಶಮಾರ್ಗವನ್ನ ತೋರಸತೇನೆ. ಎಲೈ ನನ್ನ ಹೃದಯವೇ ! ನೀನಿಂದಿನಿಂದ ಪವಿತ್ರನಾಗು, ದುಷ್ಟ ವಿಷಯಲಾಲಸೆಯ ಕಡೆಗೆ ಹೊರಳಬೇಡ. ಎಲೈ ನನ್ನ ಚಂಚಲೇಂದ್ರಿಯಗಳೇ ! ನೀವು ಸ್ಥಿರಪ್ರತಿಜ್ಞರಾಗಿರಿ, ನಿಮ್ಮಿಂದೆಂದೂ ಇನ್ನು ದುರಾಚರಣೆಯು ನಡೆಯದಿರಲಿ. ಓ ನನ್ನ ಹೃದಯಸ್ಥ ಪರಮೇಶ್ವರಾ ! ನೀನು ಎಂದೆಂದೂ ನಿನ್ನಾ ಸತ್ಪ್ರಭೆಯನ್ನು ನನ್ನ ಮೇಲೆ ಬೀರಿ ನನ್ನನ್ನು ಪಾಪಮಾರ್ಗದಿಂದ ನಿವೃತ್ತಗೊಳಿಸಿ ಸತ್ಪಥದಲ್ಲಿ ನಡೆಸು. (ಹೋಗುವನು)

[ ತೆರೆ ಬೀಳುವುದು ]

## ನೋಟ ೪

[ ಊರ ಮುಂದಿನ ದೇವಸ್ಥಾನದ ಹೆಬ್ಬಾಗಿಲು. ರೈತರಲ್ಲಿ ಕೆಲವರೂ ರಾಮಯ್ಯನೂ ಕುಳಿತಿರುವರು.

ರಾಮಯ್ಯ—ಸಂಕಪ್ಪ ! ನೋಡ್ರಿ, ನಮ್ಮೀ ರಾತ್ರಿ ಪಾಠಶಾಲೆಯಿಂದ ಬಡ ರೈತರಿಗೆ ಎಷ್ಟು ಉಪಯೋಗವಾಗಿದೆ ನೋಡಿ.... ಕೇವಲ ಆರೇಳು ತಿಂಗಳ ಪರಿಶ್ರಮದಿಂದಲೇ ಎಷ್ಟೋ ಜನರಿಗೆ ಹಾಗೂ ಹೀಗೂ ಓದಲಿಕ್ಕೂ ಬರೆಯಲಿಕ್ಕೂ ಬರುತ್ತಾ ಇದೆ. ಮೊದಲೇ ಅಕ್ಷರಸ್ಥರಾದ ಕೆಲವರಿ

ಗಂತೂ ಈಗ ಒಳ್ಳೇ ಬೆಳೆಯುವ ಗಿಡಕ್ಕೆ ಗೊಬ್ಬರ ನೀರು ಸಿಕ್ಕಂತಾಗಿದೆ. ಅವರು ಪ್ರತಿದಿನ ಬೇರೆ ಬೇರೆ ವಾರಪತ್ರಿಕೆಗಳನ್ನೋ ಮಾಸಪತ್ರಿಕೆಗಳನ್ನೋ ಓದಿಕೊಂಡು ತಾವು ಯಾವ ರೀತಿ ಏಳಿಗೆಯನ್ನು ಹೊಂದಬಹುದೆಂಬ ಬಗ್ಗೆ ಚಿಂತಿಸತೊಡಗಿದ್ದಾರೆ.

ಸಂಕಪ್ಪ—ಹೌದು ಸಣ್ಣಗೌಡ್ರ. ಇದೆಲ್ಲ ನಿಮ್ಮ ಶ್ರಮದ ಫಲ. ನನ್ಗೂ ಕೂಡ ಸ್ವಲ್ಪ ಸ್ವಲ್ಪ ಓದ್ಪೋಕೆ ಬರತದೀಗ.

ಒಂದನೆಯವ—ಸಣ್ಣ ಗೌಡ್ರ, ಇನ್ನೂ ಒಂದೆರಡು ಪತ್ರಿಕೆ ತರ್ಸ್ನೋ ಹಾಗೆ ಮಾಡ್ತೀರೇನು ?

ಎರಡನೆಯವ—ಪತ್ರಿಕೆ ಎಷ್ಟು ತರ್ಸಿದ್ರೂ ಅಷ್ಟೇ ಅಯ್ಯಾ....ಒಂದರ ನಕಲು ಒಂದು ! ಅದರ ಬದಲು ಹತ್ತು ರಾಟೀನಾದ್ರೂ ತರ್ಸಿದರೆ ಹಾಯಾಗಿ ನೂಲ್ತಾ ಕುಂತಿರಬಹುದಿತ್ತು.

ಲಿಂಗಪ್ಪ—ಸುಮ್ನೇ ನೂತ್ರೆ ಬಟ್ಟೇ ಮಾಡೋರ್‍ಯಾರಣ್ಣಾ ? ಒಂದು ಮಗ್ಗವೂ ಬೇಕೋ ಬೇಡ್ವೋ ಹೇಳು. ಆದ್ರಿಂದ ನಾನನ್ನೋದಂದ್ರೆ ಚರಖಾ-ಮಗ್ಗಾ ಎರಡೂನೂ ಬೇಕು ಅಂತ.

ಎರಡನೆಯವ—ನೂಲು ನೂತು ಛಲವಾದೀಗೆ ಕೊಟ್ರೆ ನೇದುಕೊಡ್ತಾನೆ. ಅದೇನು ಕಷ್ಟವೇನು ?

ಒಂದನೆಯವ—ಈ ಪ್ಯಾಟೇ ಬಟ್ಟೆ ನೇಯೋರೇ ಇಲ್ಲ ಈಗ. ಛಲವಾದೀ ಮಗ್ಗಾ ಮಾರಾಟ ಆಗಿಹೋಯ್ತು.

ಚನ್ನ—ಕೆಲ್ಸಾ ಬರತ್ತೋ ಇಲ್ವೋ ಅವರಿಗೇ .... ಮಗ್ಗ ತಂದ್ಕೊಟ್ರೆ ನೇದೇ ನೇಯ್ತಾನೆ.

ರಾಮಯ್ಯ—ಹೌದಪ್ಪಾ, ನಾವು ಹಳ್ಳಿಯವರು ಉಂಡು ಉಡಲು ಬೇರೆಯವರನ್ನ ಆಶ್ರಯಿಸಬಾರದು. ನನಗೆ ಸಾಧ್ಯವಾದಷ್ಟು ಜಾಗ್ರತೆ ಈ ನೂಲುವ ಮತ್ತು ನೇಯುವ ವ್ಯವಸ್ಥೆಯನ್ನ ಮಾಡಬೇಕೆಂಬ ಆಸೆಯಿದೆ.

ಒಂದನೆಯವ—ಪುಸ್ತಕಭಂಡಾರ ತೆರೀತೇನಂದ್ರಲ್ಲಾ ಗೌಡ್ರ ?

ಎರಡನೆಯವ—ನೀನೊಬ್ಬ ಇಲ್ಲದ್ದೇ ಎಲ್ಲ ಕಟ್ಕೊಂಡು ಒದ್ದಾಡ್ತಾ ಇದ್ದೀ. ಅಲ್ಲೋ, ಪುಸ್ತಕಭಂಡಾರ ಬಂದ್ಮ್ಯಾಕ್ಲೆ ರೈತ್ರ ಆದಾಯ ಹೆಚ್ಚತ್ತೇನೋ?

ಮೂರನೆಯವ—ಹಾಂಗಾದ್ರೆ ಜೇನು ಸಾಕೋ ಕ್ರಮವನ್ನ ಇಟ್ರೆ ಆದೀ ತಲ್ಲೇನು ?

ರಾಮಯ್ಯ—ನೋಡಿ, ನಿಮ್ಮ ಜ್ಞಾನ ಈಗ ಎಷ್ಟು ಹೆಚ್ಚಿದೆ ನೋಡಿ! ಯಾವ ರೀತಿಯಲ್ಲಿ ದುಡಿದರೆ ನಮ್ಮ ಆರ್ಥಿಕ ಸ್ಥಿತಿ ಸುಧಾರಿಸೀತು ? ಯಾವ ರೀತಿಯಿಂದ ನಡೆದರೆ ನಮ್ಮ ಜೀವನದ ಮಟ್ಟ ಉತ್ತಮವಾದೀತು ? ಪರಕೀಯರು ಯಾವ ರೀತಿ ದುಡಿಯುತ್ತಿದ್ದಾರೆ, ಎಂಬ ಎಲ್ಲಾ ತಿಳು ವಳಿಕೆಯೂ ಈಗೀಗ ನಿಮಗಾಗಿದೆ. ನನಗೆ ಪ್ರತಿಯೊಬ್ಬ ರೈತನಿಗೂ ಒಂದೊಂದು ಉಪಕಸಬನ್ನು ಕಲ್ಪಿಸಿಕೊಡಬೇಕಂದಿದೆ, ಅದಕ್ಕಾಗಿಯೇ ನಾನು ಬಹುವಾಗಿ ಯೋಚಿಸುತ್ತಿದ್ದೇನೆ.

ಲಿಂಗಪ್ಪ—ಹಾಂಗಾದ್ರೆ ಚಾಪೆ ನೇಯೋದು ನನಗಿರಲಿ, ನಮ್ಮ ಹಳ್ಳದ ದಡ ದಲ್ಲಿ ಒಳ್ಳೇ ಆಪು ಸಿಗುತ್ತೆ.

ಸಂಕಪ್ಪ—ನನಗೆ ಬರೇ ಬೇಸಾಯ ಸಾಕು, ಕಾಳಿನ ಜತೆಗೇ ನಾನು ಈ ವರ್ಷ ಬೇಕಷ್ಟು ತರಕಾರೀ ಬೆಳೀಬೇಕಂತಿದ್ದೀನಿ. ಇದು ಬಹು ಫಾಯ್ದೇ ಕೆಲ್ಸ.

ಚನ್ನ—ಸಂಣ ಗೌಡ್ರಾ, ಯಾವ್ದೋ ಸರ್ಕಾರೀ ಗೊಬ್ರಾ ಉಂಟೂ ಅಂದ್ರಲ್ಲಾ ಅದನ್ನಷ್ಟು ತರ್ಸಿಕೊಡ್ತೀರೇನು ? ನಮ್ಮ ತರ್ಕಾರೀ ಗಿಡಗಳ ಬುಡಕ್ಕೆ ಅದೇ ಹಾಕಬೇಕಂತಿದ್ದೀನಿ ನಾನೀ ವರ್ಷ.

ಎರಡನೆಯವ—ಗಿಡ ಎಲ್ಲಾ ಸುಟ್ಟುಹೋಗತ್ತೇ ಕಣೋ ಅದನ್ನ ಹಾಕಿದ್ರೆ ; ನಾನು ಕಂಡೀನಿ ಅದನ್ನ ತಂದು.

ರಾಮಯ್ಯ—ಅದಕ್ಕೂ ಕ್ರಮವಿದೆಯಪ್ಪಾ. ನಮ್ಮ ಹಿತ್ತಿಲಿನಲ್ಲಿ ಅದೇ ಗೊಬ್ಬರವನ್ನೇ ನಾನು ಉಪಯೋಗಿಸಿದ್ದೇನೆ ನೋಡು, ಗಿಡ ಹಿಡಿಸಲಾರದಷ್ಟು ಫಲ ನಿಂತಿದೆ.

ಚನ್ನ—....ಕೇಳ್ದಿಯೇನು ?

ರಾಮಯ್ಯ—ನಮ್ಮ ಮುಂದಿನ ಎಲ್ಲಾ ಕೆಲ್ಸವೂ ಈಗ ನಿಂತಿರುವುದು ಹಣದಿಂದ; ನಮಗೆ ಹಣ ಬೇಕು. ರೈತರದ್ದೇ ಆದ ಒಂದು ಸಹಕಾರ ಸಂಘ ಬೇಕು. ಅದಿದ್ದರೆ ನಾವೆಲ್ಲವನ್ನೂ ಮಾಡಬಹುದು. ಅದಕ್ಕಾಗಿಯೇ ನಾನು ಕೆಲವು ಜನ ಮುಖಂಡರನ್ನು ಕೇಳಬೇಕೆಂದಿದ್ದೇನೆ ದ್ರವ್ಯ ಸಹಾಯಕ್ಕಾಗಿ. ಈಗ ನಮ್ಮಲ್ಲಿ ಹಣವಿಲ್ಲ-ಯೋಜನೆ ಮಾತ್ರ ಇದೆ.

ಲಿಂಗಪ್ಪ—ಹೌದು ಗೌಡ್ರಾ--ನೀವಿದ್ಕೆ ಕೈಹಾಕಿದ್ರೆ ಆಗತ್ತೆ. ನಾವ್ಕೇಳಿದ್ರೆ ಚಿಕ್ಕಾಸೂ ಕೊಡೋದಿಲ್ಲ. ಜತೇಗೆ ಬೇಕಾದ್ರೆ ಸಿದ್ದಣ್ಣನ್ನೂ ತಕ್ಕೊಳ್ಳಿ. ಅವನ ಮಾತಿಗೂ ಬೆಲೆ ಬಂದೀತು.

ರಾಮಯ್ಯ—ಓಹೋ, ಇಂದೇನಿಂದು ಸಿದ್ದಣ್ಣನವರ ಸವಾರಿ ಬಂದೇ ಇಲ್ಲವಲ್ಲ, ಊರಲ್ಲಿಲ್ಲವೇನು ಅವರು ?

ಒಂದನೆಯವ—ಇದ್ದಾರೆ ಗೌಡ್ರ. ನಾನೂ ಸಿದ್ದಣ್ಣನೂ ಕೂಡಿಯೇ ಬರ್ತಿದ್ದೆವು, ಇತ್ತಲಾಗಿ ಅಷ್ಟರಲ್ಲೇ ತಲವಾರ ತಿಮ್ಮ ಬಂದು ತಮ್ಮ ಅಪ್ಪಾವರು ಕರ್ದರೂ ಅಂತ ಕರ್ಕೊಂಡು ಹೋದ ; ಬಂದಾರು.

ಎರಡನೆಯವ—ಹಾಂಗಾದ್ರಾತ ಸಾವ್ಕಾರ್ರಲ್ಲೀಗೆ ಹೋಗಿರ್ಬೇಕು. ಯಾಕಂದ್ರೆ ಸಾವ್ಕಾರ್ರೂ ಗೌಡ್ರೂ ಕೂಡಿಯೇ ಆಗ ಮನೆಗೆ ಹೋದ್ರು. ಹೋಗ್ತಾ ತಿಮ್ಮನ್ನ ಕೂಗಿ ಹೇಳಿದ್ದನ್ನ ಕೇಳ್ದೆ ನಾನು ಸಿದ್ದಣ್ಣೋರ್ನ ಕರೆಯೋಕೆ.

ರಾಮಯ್ಯ—ಇದೇನಪ್ಪಾ ಮತ್ತೆ ರಾತ್ರಿ ವಿಚಾರ ಸಿದ್ದಣ್ಣನಲ್ಲೀ !

ಸಿದ್ದಪ್ಪ—(ಪ್ರವೇಶಿಸಿ) ಸಂಣ ಗೌಡ್ರೆ, ಸಾವ್ಕಾರ್ರಿಗಿನ್ನೂ ಬುದ್ಧಿ ಬಂದಿಲ್ಲಾ

ಕಾಣ್ರೆ. ಪಾಪ, ಸಂಕಣ್ಣನ್ನ ಇಷ್ಟು ದುಸ್ಥಿತೀಗೆ ತಂದ್ರೂ ಇನ್ನೂ ಅಪ್ನೀಗೆ ತೃಪ್ತಿಯಾಗಿಲ್ಲ.

ರಾಮಯ್ಯ—ಹಾಂ--ಅದೇನಂತೆ ಅವ್ನ ವಿಚಾರ ? ನಿಮಗೆ ಕರೀಲಿಕ್ಕೆ ಆಳು ಬಂದಿತ್ತಂತಲ್ಲಾ !

ಸಿದ್ದಪ್ಪ— ಹಾಂ–ಆಳು ಬಂದಿತ್ತೂ–ಹೋಗಿದ್ದೆ. ಕಳ್ದ ಕಣ್ದ ಸುಗ್ಗೀ ಕಾಲ್ದಾಗೆ ನಾನು ಕೇಣೀ ಕಾಳ್ಬಗ್ಗೆ ಸಂಕಣ್ಣನಿಗೆ ಹಣಾ ಕೊಟ್ಟು ಅವ್ನ ಹೊಲಾ ನನ್ನ ಹೆಸರೀಗೆ ದೀಡು ಮಾಡ್ಕೊಂಡಿದ್ದೆನಲ್ಲಾ, ಅದನ್ನ ಈಗ ತನ್ನ ಹೆಸ್ರೀಗೆ ಬಿಟ್ಕೊಡು, ಮೇಲೆ ಒಂದು ಸಾವಿರ ತಗೋ ಅಂತ ಸಾವ್ಕಾರ ಕೂತಾನೆ.

ರಾಮಯ್ಯ—ಉದ್ದಿಶ್ಯ ?

ಸಿದ್ದಪ್ಪ—ಇನ್ನೇನು ರಾಮಣ್ಣಗೌಡ್ರೇ–ಸಂಕಣ್ಣನ್ನಷ್ಟು ಒತ್ತರೇ ಮಾಡೋದು. ಆತ್ನ ಹೊಲಾ ಮಾರಾಟ ಮಾಡ್ಸಿ ಊರು ಬಿಟ್ಟು ಓಡ್ಸೋವರೆಗೂ ಅಪ್ನೀಗೆ ತೃಪ್ತಿಲ್ಲಾ. ಸಾಲದ್ದಕ್ಕೆ ಅವ್ನ ಜತೇಗೆ ನಿಮ್ಮಪ್ಪವ್ರೂ ಸೇರ್ಕೊಂಡಿದ್ದಾರೆ.

ಸಂಕಪ್ಪ—ಸಿದ್ದಣ್ಣಾ ! ನೀನವ್ರ ಮಾತೀಗೆ ಸೋತು ಹಾಂಗೆಲ್ಲಾದ್ರೂ ಮಾಡ್ಬೇಡ ಕಾಣಪ್ಪಾ. ನಾನು ಹುಟ್ದ ಊರು, ನಾನು ಮಾಡ್ದ ಹೊಲಾ ನನ್ನ ಕೈತಪ್ಸಿ ನನ್ನನ್ನ ಅನಾಥನ್ನ ಮಾಡ್ಬೇಡಾ. ಪೂರ್ಣ ಒಮ್ಮೆಗೇ ಕೊಡ್ಲಿಕ್ಕೆ ಆಗದಿದ್ರೆ ತುಸ ತುಸ ಕೊಟ್ಕೊಂಡ ಬಂದು ನಿನ್ನ ಋಣಾ ತೀರ್ಸ್ತೀನೆ ನಾನು. ನಾನು ಸತ್ರೆ ನನ್ನನ್ನ ಅಲ್ಲೇ ಮಣ್ಣು ಮಾಡ್ರಪ್ಪಾ ಸಿದ್ದಣ್ಣಾ–ನನ್ನ ಹೊಲ್ದಲ್ಲೀ.

ಸಿದ್ದಪ್ಪ—ನಾನೇನು ಅವ್ರ ಹಾಂಗೆ ಕಟ್ಕಾ ಅಂತ ತಿಳ್ದಿಯೇನೋ ಸಂಕಣ್ಣಾ ? ಕೇಳು–ನಿನ್ನ ಹೊಲಾ ನೀನು ಯಾವಾಗ್ಲೀ ಬಿಡ್ಸಿಕೋ–ಅದು ನಿನ್ನದೇ. ಅದನ್ನ ಬೇರೆಯವ್ರ ಮಾರೀಪತ್ತು ಮಾತ್ರ ಮಾಡೋದಿಲ್ಲ ನಾನು.

ರಾಮಯ್ಯ—ಸಂಕಣ್ಣಾ-ನೀವು ಹೆದ್ರಬೇಡ್ರಿ, ದೇವರಿದ್ದಾನೆ, ಎಲ್ಲಾ ಸರಿ ಮಾಡ್ತಾನೆ ಆತ. ಭೂಮಿತಾಯನ್ನ ನಂಬ್ದೋರು ಯಾರೂ ಹಾಳಾಗಿಲ್ಲ ಕಾಣ್ರಪ್ಪಾ.

ಸಂಕಪ್ಪ—ನನ್ಗೂ ಅದೇ ಧೈರ್ಯ. ಉಳ್ಸೋನೂ ತೆಗ್ಯೋನೂ ಅವ್ನೇ !

[ತೆರೆ ಬೀಳುವುದು]

## ನೋಟ ೫

[ ಊರಿನ ಒಂದು ಭಾಗ. ಗೌಡರೂ ಗಿರಿಯಪ್ಪನವರೂ ಪ್ರವೇಶಿಸುವರು. ]

ಗಿರಿಯಪ್ಪ—ಸಂಕಪ್ನ ಕಣ್ದ ಸುಗ್ಗೀ ಆಯ್ತಂತಲ್ಲಾ ಗೌಡ್ರೆ. ನಿಮ್ಮ ಸರ್ಕಾರ್ದ ಹಣಾ ಗಿಣಾ ಬಂತೇನ ಈ ಕಿಸ್ತಿನದು ?

ಗೌಡ—ಈ ವರ್ಷದ ಪೈರೂ ಆತನದು ಚೆನ್ನಾಗಿಯೇ ಇದ್ದ ಹಾಂಗಿದೆ. ಸಿದ್ದಪ್ಪನ ಸಾಲದ ಬಡ್ಡಿನೂ ಕೊಟ್ಟನಂತೆ. ಅಸಲು ಪೈಕಿಯೂ ಅರ್ಧಾಂಶ ಏನೋ ತೀರ್ಸಿದನಂತೆ. ನಮ್ಮ ಕಂದಾಯ ಪೂರ್ಣ ಬೇಬಾಕ್ ಮಾಡಿಬಿಟ್ಟಿದ್ದಾನೆ ನಿನ್ನೇನೇ ಬಂದು.

ಗಿರಿಯಪ್ಪ—ಆಂ-ಬೇಬಾಕಿ ? ಗೌಡ್ರೇ, ನಾನು ಸತ್ಯ ಹೇಳ್ತೀನೆ, ನೋಡಿ, ಅವನಿಗ್ಯಾರೋ ಒಳಗಿಂದೊಳಗೇ ಸಹಾಯ ಮಾಡ್ತಿದ್ದಾರಂತ ತೋರತ್ತೆ ನನಗೆ.

ಗೌಡ—ಇರಬೇಕು; ಇಲ್ಲವಾದ್ರೆ ಕಳ್ದ ಬಾಕೀ ಕಂದಾಯ ಕೊಡ್ಲಿಕ್ಕೆ ಅವ್ನಲ್ಲಿ ಒಂದು ಹಿಡೀ ಕಾಳೂ ಉಳ್ದಲಿಲ್ಲ ನಾವು. ಅದನ್ನೂ ಕೊಟ್ಟ, ಈವರೇಗೆ ಜೀವನಾನೂ ನಡೀತು. ಈಗ ಕಂದಾಯ-ಸಾಲ್ದ ಬಡ್ಡೀ ಸಹಾ ಕೊಟ್ಟು ಕೈ ತೊಳ್ಕೊಂಡು ಕೂತುಬಿಟ್ಟಿದ್ದಾನೆ ಅಂದ್ರೆ ಇದರಲ್ಲೇನೋ ಗುಟ್ಟಿದೆ.

ಗಿರಿಯಪ್ಪ—ನಿಮ್ಗೇನಾದ್ರೂ ಅರ್ಥ ಆಯ್ತೇನು ಇದರದ್ದು ?

ಗೌಡ—ಏನೂ ಇಲ್ಲಾ ನೋಡಿ. ಜನ್ರಂತಾರೆ ಹೊಲಾ ಕೊಟ್ಟತೂ ಅಂತ; ಆ ಹೊಲಾ ಕೊಟ್ಟದ್ದು ಈ ವರೆಗೆ ನೋಡಿಲ್ಲೇನು ನಾವು ? ಈಗ ಹೆಚ್ಚಂದ್ರೆ ತರ್ಕಾರೀ ಅಷ್ಟು ಚೆನ್ನಾಗಿ ಬೆಳ್ಳಕೊಂಡಿದ್ದಾನೆ. ನಾಲ್ಕು ಕಾಸೂ ಸಿಕ್ಕತ್ತೆ. ಅದು ಊಟಕ್ಕೆ ಆಗಿಹೋಯ್ತಲ್ಲಾ ಮುಂದೆ ?

ಗಿರಿಯಪ್ಪ—ನಾನು ಹೇಳ್ತೀನೆ ಕೇಳ್ತೀರೇನು-ಹಣಾ ಎಲ್ಲಿಂದ ಬಂತೂ ಅಂತ ?

ಗೌಡ—ಹಾಂ-ಹೇಳ್ರಲ್ಲಾ-ಗೊತ್ತಾಯ್ತೇನು ನಿಮ್ಗೆ ?

ಗಿರಿಯಪ್ಪ—ಬೇಸ್ರ ಇಲ್ಲವಷ್ಟೆ ?

ಗೌಡ—ಬೇಸ್ರ ಯಾತಕ್ರೀ ಇದ್ರಲ್ಲೀ !

ಗಿರಿಯಪ್ಪ—ಗೌಡ್ರೆ, ಇದೆಲ್ಲ ನಿಮ್ಮ ರಾಮಯ್ಯಗೌಡ್ರ ಕಾರಭಾರ ಅಂತ ಕಾಣತ್ತೆ. ಹಗ್ಲೂ ರಾತ್ರೂ ಅಂವ್ನಲ್ಲೇ ಇರ್‍ತಾನಂತೆ ಪ್ರಾಯ ನೋಡೀ....ಹ್ಯಾಂಗೂ ನಂಕಪ್ನ ಮುಗ್ಳು ಅಚ್ಚುಕಟ್ಟಾಗಿದ್ದಾಳೆ. ಮಾವ ಅಳಿಯಂದಿರು ಹೊಲ್ದಲ್ಲಿ ದುಡೀತಾ ಇರ್‍ತಾರೆ-ಇನ್ನೇನು ಕೇಳ್ಬೇಕೇನು ? ಸಹಾಯ ಸಾರೋದ್ಧಾರವಾಗಿ ನಡೀತ್ತೆ !

ಗೌಡ—ನನಗಿದ್ರಲ್ಲಿ ನಂಬಿಕೆ ಇಲ್ಲಾ. ನನ್ನ ಹುಡುಗ ಎಷ್ಟೇ ನನ್ಗಿದಿರಾಡಿದ್ರೂ ಅವ್ನ ಕಚ್ಚೆ ಕೈ ಮಾತ್ರ ಶುದ್ಧವಾಗಿಯೇ ಇದೇ ಅಂತ ನನ್ನ ನಂಬಿಕೆ. ಇದ್ರ ಮೇಲೆ ಕೊಡೋಕೆ ಅವ್ನ ಹತ್ರ ಎಲ್ಲಿ ಬರಬೇಕು ಹೇಳ್ರಿ ? ಮನೆ ಯಲ್ಲಿ ಮುದ್ದೆ ಒಂದು ಬಿಟ್ರೆ ಒಂದು ಚಿಕ್ಕಾಸೂ ಅವ್ನೀಗೆ ನಾನು ಕೊಡ್ತಾ ಇಲ್ಲ-ಅವ್ನು ಕೇಳೋದೂ ಇಲ್ಲ. ಹಾಂಗಂತ ದುಡೀಲಿಕ್ಕೇ ನಾದ್ರೂ ಕಡಿಮೆ ಮಾಡ್ತಾನೆಯೇ ? ಹತ್ತು ಜನ್ರ ಕೆಲ್ಸಾ ಅಂವ ಒಬ್ಬ ಮಾಡ್ತಾ ಇದ್ದಾನೆ.

ಗಿರಿಯಪ್ಪ—ಮನೇದ್ಯಾತಕ್ಕೆ ಬೇಕ್ರೀ ರೊಕ್ಕಾ ? ನಿಮ್ಮಗನೂ ಏನು ದಡ್ಡ ನಲ್ಲ-ತನ್ನ ಮನೇ ಹಾಳ್ಮಾಡ್ಬೇಕಂತ ಅವನೀಗೇನೂ ಇಚ್ಛೆ ಇಲ್ಲಾ.

ಹಳ್ಳಿಹಳ್ಳಿಯಲ್ಲಿ ರೈತರ ಹತ್ರ ' ನಾನು ಹಾಂಗ ಮಾಡ್ತೇನೆ, ಹೀಂಗ ಮಾಡ್ತೇನೆ ' ಅಂತ ಚಂದಾ ಎತ್ತಿ ತರ್ತ್ತಿದ್ದಾನಂತೆ. ಅವೆಲ್ಲಾ ಇಲ್ಲಿ ಈ ರೀತಿ ವಿನಿಯೋಗ! ಮೊನ್ನೆ ನನ್ನ ಹತ್ರವೂ ಬಂದಿದ್ದಾ ; ನಾನು ಮಾತ್ರ ನಾಸ್ತಿ ಅಂತ ಕಳಿಸ್ಬಿಟ್ಟೆ ಪಾಪ್ಪ.

ಗೌಡ—ನನ್ನ ಹತ್ರ ಕೇಳ್ರೀ - ಎಲ್ಲಾ ಕೊಟ್ಟದ್ದೂ ಇಷ್ಟೇ-ನಾಸ್ತಿ ! ಒಂದು ಚಿಕ್ಕಾಸೂ ಅಂವ್ನ ಕೈಗೆ ಹತ್ತಲಿಲ್ಲಾ.

ಗಿರಿಯಪ್ಪ—ಏನೋ ಅಪ್ಪ-ಇದ್ರಲ್ಲಿ ನನ್ಗೆ ನಂಬಿಕೆ ಇಲ್ಲಾ. ಆದ್ರೂ ನಿಮ್ಗೆ ಹೇಳ್ತೇನೆ, ನಿಮ್ಮದೊಂದು ಕಣ್ಣಿರಲಿ ಆತ್ನ ಮ್ಯಾಲೆ. ಬರ್ತೇನೆ.... ನಮುಸ್ಕಾರ. (ಹೋಗುವರು. ಗೌಡರು ಮತ್ತೊಂದು ಕಡೆಯಿಂದ ಹೋಗುವರು)

[ ತೆರೆ ಏರುವುದು ]

## ನೋಟ ೬

[ಸರ್ವಮಂಗಳೆಯ ಅಂತಃಪುರ. ಸರ್ವಮಂಗಳೆಯು ಪೆಟ್ಟಿಗೆಯಿಂದ ಬಟ್ಟೆಗಳನ್ನು ತೆಗೆದಿಡುತ್ತಿರುವಳು.]

ಸರ್ವಮಂಗಳೆ—ಹಾಂ—ಇದು ಚೆನ್ನಾಗಿದೆ, ಇದೂ ಒಂದಿರಲಿ. ಇಷ್ಟೊಂದು ಸೀರೆಗಳನ್ನಿಟ್ಟುಕೊಂಡು ನಾನೇನು ಮಾಡಬೇಕು ? ಸಾಕು - ಒಂದು ನಾಲ್ಕಾರು ಇದ್ದರೆ ತೀರಿತು. ಇಲ್ಲಿ ಪೆಟ್ಟಿಗೆಯ ತುಂಬ ಸೀರೆಗಳಿಗೆ ಹುಳ ಹತ್ತಿ ತಿನ್ನುತ್ತಿವೆ, ಅಲ್ಲಿ ಪಾಪ, ಬಡವರು ಮಾನ ಮುಚ್ಚುವುದಕ್ಕೂ ಅರಿವೆ ಇಲ್ಲದೆ ಗೋಳಾಡುತ್ತಿದ್ದಾರೆ. ಇವನ್ನೆಲ್ಲಾ ಅವರಿಗೆ ಕೊಟ್ಟರೆ ಎಷ್ಟು ಸಂತೋಷದಿಂದ ನಮ್ಮನ್ನು ಹರಸಿಯಾರು ? ನನ್ನ ಕಂದನಿಗೆ (ಕರ್ಪೂರದ ಬೊಂಬೆಯನ್ನು ನೋಡಿ) ಒಂದೆರಡು ಅಂಗಿಗಳಿದ್ದರೆ ತೀರಿತು—ಅಲ್ಲವೇನಪ್ಪಾ ? ಉಳಿದುದೆಲ್ಲವನ್ನೂ ನಿನ್ನ ತಮ್ಮಂದಿರಿಗೆ ಕೊಡುತ್ತೇನೆ. ಅವರನ್ನು ನೀನು ನೋಡಿರುವೆಯೇನಪ್ಪಾ? ಬರೀ ಮೈ,

ಗಿರಿಯಪ್ಪ—ನಿಮ್ಗೇನಾದ್ರೂ ಅರ್ಥ ಆಯ್ತೇನು ಇದರದ್ದು ?

ಗೌಡ—ಏನೂ ಇಲ್ಲಾ ನೋಡಿ. ಜನ್ರಂತಾರೆ ಹೊಲಾ ಕೊಟ್ಟಿತೂ ಅಂತ; ಆ ಹೊಲಾ ಕೊಟ್ಟಿದ್ದು ಈ ವರೆಗೆ ನೋಡಿಲ್ಲೇನು ನಾವು ? ಈಗ ಹೆಚ್ಚಂದ್ರೆ ತರ್ಕಾರೀ ಅಷ್ಟು ಚೆನ್ನಾಗಿ ಬೆಳ್ಳಕೊಂಡಿದ್ದಾನೆ. ನಾಲ್ಕು ಕಾಸೂ ಸಿಕ್ಕತ್ತೆ. ಅದು ಊಟಕ್ಕೆ ಆಗಿಹೋಯ್ತಲ್ಲಾ ಮುಂದೆ ?

ಗಿರಿಯಪ್ಪ—ನಾನು ಹೇಳ್ತೇನೆ ಕೇಳ್ತೀರೇನು-ಹಣಾ ಎಲ್ಲಿಂದ ಬಂತೂ ಅಂತ ?

ಗೌಡ—ಹಾಂ-ಹೇಳ್ರಲ್ಲಾ-ಗೊತ್ತಾಯ್ತೇನು ನಿಮ್ಗೆ ?

ಗಿರಿಯಪ್ಪ—ಬೇಸ್ರ ಇಲ್ಲವಷ್ಟೆ ?

ಗೌಡ—ಬೇಸ್ರ ಯಾತಕ್ರೀ ಇದ್ರಲ್ಲೀ !

ಗಿರಿಯಪ್ಪ—ಗೌಡ್ರೆ. ಇದೆಲ್ಲ ನಿಮ್ಮ ರಾಮಯ್ಯಗೌಡ್ರ ಕಾರಭಾರ ಅಂತ ಕಾಣತ್ತೆ. ಹಗ್ಲೂ ರಾತ್ರೂ ಅಂವ್ನಲ್ಲೇ ಇರ್ತಾನಂತೆ ಪ್ರಾಯ ನೋಡೀ....ಹ್ಯಾಂಗೂ ಸಂಕಪ್ನ ಮಗ್ಳು ಅಚ್ಚಕಟ್ಟಾಗಿದ್ದಾಳೆ. ಮಾವ ಅಳಿಯಂದಿರು ಹೊಲ್ದಲ್ಲಿ ಮಡೀತಾ ಇರ್ತಾರೆ-ಇನ್ನೇನು ಕೇಳ್ಬೇಕೇನು ? ಸಹಾಯ ಸಾರೋದ್ಧಾರವಾಗಿ ನಡೀತ್ತೆ !

ಗೌಡ—ನನಗಿದ್ರಲ್ಲಿ ನಂಬಿಕೆ ಇಲ್ಲಾ. ನನ್ನ ಹುಡುಗ ಎಷ್ಟೇ ನನ್ಗೆ ದಿರಾಡಿದ್ರೂ ಅವ್ನ ಕಚ್ಚೆ ಕೈ ಮಾತ್ರ ಶುದ್ಧವಾಗಿಯೇ ಇದೇ ಅಂತ ನನ್ನ ನಂಬಿಕೆ. ಇದ್ರ ಮೇಲೆ ಕೊಡೋಕೆ ಅವ್ನ ಹತ್ರ ಎಲ್ಲಿ ಬರಬೇಕು ಹೇಳ್ರಿ ? ಮನೆ ಯಲ್ಲಿ ಮುದ್ದೆ ಒಂದು ಬಿಟ್ರೆ ಒಂದು ಚಿಕ್ಕಾಸೂ ಅವ್ನೀಗೆ ನಾನು ಕೊಡ್ತಾ ಇಲ್ಲ-ಅವ್ನು ಕೇಳೋದೂ ಇಲ್ಲ. ಹಾಂಗಂತ ಮಡೀಲಿಕ್ಕೇ ನಾದ್ರೂ ಕಡಿಮೆ ಮಾಡ್ತಾನೆಯೇ ? ಹತ್ತು ಜನ್ರ ಕೆಲ್ಸಾ ಅಂವ ಒಬ್ಬ ಮಾಡ್ತಾ ಇದ್ದಾನೆ.

ಗಿರಿಯಪ್ಪ—ಮನೇದ್ಯಾತಕ್ಕೆ ಬೇಕ್ರೀ ರೊಕ್ಕಾ ? ನಿಮ್ಮಗನೂ ಏನು ದಡ್ಡ ನಲ್ಲ-ತನ್ನ ಮನೇ ಹಾಳ್ಮಾಡ್ಬೇಕಂತ ಅವನೀಗೇನೂ ಇಚ್ಛೆ ಇಲ್ಲಾ.

ಹಳ್ಳಿಹಳ್ಳಿಯಲ್ಲಿ ರೈತರ ಹತ್ರ 'ನಾನು ಹಾಂಗ ಮಾಡ್ತೇನೆ. ಹೀಂಗ ಮಾಡ್ತೇನೆ' ಅಂತ ಚಂದಾ ಎತ್ತಿ ತರ್ತಿದ್ದಾನಂತೆ. ಅದೆಲ್ಲಾ ಇಲ್ಲಿ ಈ ರೀತಿ ವಿನಿಯೋಗ! ಮೊನ್ನೆ ನನ್ನ ಹತ್ರವೂ ಬಂದಿದ್ದಾ; ನಾನು ಮಾತ್ರ ನಾಸ್ತಿ ಅಂತ ಕಳಿಸ್ಬಿಟ್ಟೆ ವಾಪ್ಸು.

ಗೌಡ—ನನ್ನ ಹತ್ರ ಕೇಳ್ರೀ - ಎಲ್ಲಾ ಕೊಟ್ಟದ್ದೂ ಇಷ್ಟೇ-ನಾಸ್ತಿ ! ಒಂದು ಚಿಕ್ಕಾಸೂ ಅಂವ್ನ ಕೈಗೆ ಹತ್ತಲಿಲ್ಲಾ.

ಗಿರಿಯಪ್ಪ—ಏನೋ ಅಪ್ಪ-ಇದ್ರಲ್ಲಿ ನನ್ಗೆ ನಂಬಿಕೆ ಇಲ್ಲಾ. ಆದ್ರೂ ನಿಮ್ಗೆ ಹೇಳ್ತೇನೆ, ನಿಮ್ಮದೊಂದು ಕಣ್ಣಿರಲಿ ಆತ್ನ ಮ್ಯಾಲೆ. ಬರ್ತೇನೆ.... ನಮಸ್ಕಾರ. (ಹೋಗುವರು. ಗೌಡರು ಮತ್ತೊಂದು ಕಡೆಯಿಂದ ಹೋಗುವರು)

[ ತೆರೆ ಏರುವುದು ]

## ನೋಟ ೬

[ಸರ್ವಮಂಗಳೆಯ ಅಂತಃಪುರ. ಸರ್ವಮಂಗಳೆಯು ಪೆಟ್ಟಿಗೆಯಿಂದ ಬಟ್ಟೆಗಳನ್ನು ತೆಗೆದಿಡುತ್ತಿರುವಳು.]

ಸರ್ವಮಂಗಳೆ—ಹಾಂ-ಇದು ಚೆನ್ನಾಗಿದೆ, ಇದೂ ಒಂದಿರಲಿ. ಇಷ್ಟೊಂದು ಸೀರೆಗಳನ್ನಿಟ್ಟುಕೊಂಡು ನಾನೇನು ಮಾಡಬೇಕು ? ಸಾಕು - ಒಂದು ನಾಲ್ಕಾರು ಇದ್ದರೆ ತೀರಿತು. ಇಲ್ಲಿ ಪೆಟ್ಟಿಗೆಯ ತುಂಬ ಸೀರೆಗಳಿಗೆ ಹುಳ ಹತ್ತಿ ತಿನ್ನುತ್ತಿವೆ, ಅಲ್ಲಿ ಪಾಪ, ಬಡವರು ಮಾನ ಮುಚ್ಚುವು ದಕ್ಕೂ ಅರಿವೆ ಇಲ್ಲದೆ ಗೋಳಾಡುತ್ತಿದ್ದಾರೆ. ಇವನ್ನೆಲ್ಲಾ ಅವರಿಗೆ ಕೊಟ್ಟರೆ ಎಷ್ಟು ಸಂತೋಷದಿಂದ ನಮ್ಮನ್ನು ಹರಸಿಯಾರು ? ನನ್ನ ಕಂದನಿಗೆ (ಕರ್ಪೂರದ ಬೊಂಬೆಯನ್ನು ನೋಡಿ) ಒಂದೆರಡು ಅಂಗಿಗಳಿದ್ದರೆ ತೀರಿತು-ಅಲ್ಲವೇನಪ್ಪಾ ? ಉಳಿದುದೆಲ್ಲವನ್ನೂ ನಿನ್ನ ತಮ್ಮಂದಿರಿಗೆ ಕೊಡುತ್ತೇನೆ. ಅವರನ್ನು ನೀನು ನೋಡಿರುವೆಯೇನಪ್ಪಾ ? ಬರೀ ಮೈ,

ಬರೀ ಹೊಟ್ಟೆ, ಕಂಗಾಲ ಹುಡುಗರು! ನಿನ್ನೀ ಉಡಿಗೆಗಳನ್ನ ಅವರಿಗಿತ್ತರೆ ಅವರೆಷ್ಟು ಸಂತೋಷಪಡಬಹುದು! (ಎಲ್ಲವನ್ನೂ ಓರಿಗೆಯಾಗಿಟ್ಟು) ಮುದ್ದಜ್ಜಾ....ಮುದ್ದಜ್ಜಾ!

ಮುದ್ದಜ್ಜ—(ಪ್ರವೇಶಿಸಿ) ಬಂದೀನ್ರೀ ತಾಯೀ, ಏನು ಕರದರವ್ವಾ?

ಸರ್ವಮಂಗಳೆ—ಅಜ್ಜಾ....ನೋಡಿದಿಯೇನಿಲ್ಲಿ? ಹ್ಯಾಂಗಿದೆ ಅರಿವೆ?

ಮುದ್ದಜ್ಜ—ಹಾಂ-ನೋಡಿದ್ನರವ್ವಾ. ಇದೇನಿಂದು ಅಂಗ್ಡೀ ಹಚ್ತೀರೇನು ಇವನ್ನೆಲ್ಲಾ ತಕ್ಕೊಂಡು?

ಸರ್ವಮಂಗಳೆ—ಅಲ್ಲ ಮುದ್ದಜ್ಜಾ. ಇವನ್ನೆಲ್ಲಾ ನಾನು ನಮ್ಮ ಬಡರೈತರ ಮಕ್ಕಳಿಗೆ ಕೊಡಬೇಕಂತಿದ್ದೇನೆ. ಪಾಪ, ಅವರಾದರೂ ಎಷ್ಟು ಹಿಗ್ಗಿಯಾರು ಇವನ್ನೆಲ್ಲ ತಕ್ಕೊಂಡು? ಬರ್ತಿಯೇನು ನೀನೂ ಜತೆಗೆ?

ಮುದ್ದಜ್ಜ—ಬರೀನ್ರವ್ವಾ. ಹಾಂ-ಇದೇನ್ರವ್ವಾ, ನೀವ್ನೀ ಭಾರೀ ಸೀರೆಗಳನ್ನೆಲ್ಲಾ ಅವ್ರೀಗೆ ತೆಗೆದಿಟ್ಟುಬಿಟ್ಟು ಇದೊಂದು ಬಿಳೀ ಪತ್ಲಾ ಉಟ್ಟಬಿಟ್ರೆಲ್ಲಾ?

ಸರ್ವಮಂಗಳೆ—ಸಾಲದೇನಪ್ಪಾ ಇಷ್ಟು? ಮುದ್ದಜ್ಜಾ-ಶ್ರೀಮಂತಿಕೆ ನಾವು ಉಂಡುಟ್ಟು ಮೆರೆಯೋದ್ರಲ್ಲೇ ಇಲ್ಲಾ; ದೇವ್ರು ನಮಗೆ ಕೊಟ್ಟರೋದು ಬೇರೆಯವರೀಗೆ ಕೊಡಬೇಕಂತ್ಲೇ!

ಮುದ್ದಜ್ಜ—(ದಿಟ್ಟಿಸಿ ನೋಡುತ್ತ) ನಿಲ್ಲರವ್ವಾ! ಹಾಂಗೇ ಸ್ವಲ್ಪ ನಿಲ್ಲರವ್ವಾ. ತುಸೂ ನಿಮ್ಮನ್ನೋಡ್ಕೋತೀನಿ.

ಸರ್ವಮಂಗಳೆ—ಅದ್ಯಾಕಜ್ಜಾ ನನ್ನನ್ನೋಡ್ಕೋತಿ? ಈ ವರೇಗೆ ನನ್ನನ್ನ ನೋಡಲೇ ಇಲ್ಲವೇನು ನೀನು?

ಮುದ್ದಜ್ಜ—ನೋಡಿದ್ದನರವ್ವಾ. ಆದ್ರೆ ನಿಮ್ಮಂತೇ ಇರೋ ಇನ್ಯಾರೋ ತಾಯನ್ನ ನೋಡ್ದ ನೆಂಪಾಯ್ತು ನಂಗೇ-ಅದನ್ನೇ ನೆಂಪ ಮಾಡ್ಕೋ

ತೀನಿ, ನೆಂಪೇ ಆಗವೊಲ್ಲದು. ಅದ್ಕೇ ತುಸು ನಿಲ್ಲರವ್ವಾ...ಚಣ ಹೊತ್ತು ಜಾಪ್ಸಕೋತೀನಿ.

ಸರ್ವಮಂಗಳೆ—ಅಜ್ಜಾ.... ನಿನಗೇನೋ ಹುಚ್ಚು ಹಿಡಿದಿದೆ ಇಂದು! ಆಗ್ಲಿ, ನೆನ್ಪುಮಾಡ್ಕೋ. ನಿನ್ನ ಇಷ್ಟದಂತೆಯೇ ನಿಲ್ಲುತ್ತೇನೆ. (ನಿಲ್ಲುವಳು. ಮುದ್ದಜ್ಜನು ನೋಡುತ್ತ ಜ್ಞಾಪಿಸಿಕೊಳ್ಳುತ್ತಲಿರುವನು.) ಹಾಂ .... ನೆನಪಿಗೆ ಬಂತೇನು ?

ಮುದ್ದಜ್ಜ—ಇಲ್ಲ ತಾಯೀ.... ಇನ್ನೂ ಇಲ್ಲ.

ಗಿರಿಯಪ್ಪ—(ಪ್ರವೇಶಿಸಿ) ಹಾಗಾದರೆ ನಾನು ಹೇಳಲೇನು ? (ಇಬ್ಬರೂ ಸರಿದು ನಿಲ್ಲುವರು) ಹೂಂ -- ಸರ್ವೂ, ಹಾಗೇ ನಿಲ್ಲು. ನಾನೊಂದು ಭಾವ ಚಿತ್ರವನ್ನ ತರುತ್ತೇನೆ. (ಓಡುವನು. ಮುದ್ದಜ್ಜನೂ ಸರ್ವಮಂಗಳೆಯೂ ಮಿಕಿಮಿಕಿ ನೋಡುತ್ತಲಿರುವರು. ಗಿರಿಯಪ್ಪನು ಓಡಿಬಂದು ಭಾವಚಿತ್ರವನು ಮುದ್ದಜ್ಜನ ಕೈಗೆ ಕೊಟ್ಟು) ಮುದ್ದಪ್ಪಾ, ಇದು ನೋಡು! ಇದ್ಯಾರ ಚಿತ್ರ ಹೇಳು ?

ಮುದ್ದಜ್ಜ—(ನೋಡಿ) ನಮ್ಮಮ್ಮಾವ್ರುದ್ದಲ್ಲೇನು ಬುದ್ದೀ ? ಹಾಂ-ಇದನ್ನೇ ಕಂಡಿದ್ದೆ ನಿನ್ನೆ ರಾಮಯ್ಯಗೌಡ್ರ ಹತ್ರ. (ಹೋಗುವನು)

ಗಿರಿಯಪ್ಪ—ಸರಿ, ಚೆನ್ನಾಗಿಯೇ ಹೇಳಿದ. ಅದೇ ಚಿತ್ರದ ಇನ್ನೊಂದು ನಕ್ಲು ಇದು, ನಾನು ಈಗಲೇ ಕೊಂಡು ತಂದೆ.

ಸರ್ವಮಂಗಳೆ—ಹಾಂ ! ನನ್ನ ಚಿತ್ರ – ರಾಮಯ್ಯನ ಹತ್ರ !! ನೀವು ಕ್ರಯಕ್ಕೆ ತಂದರಾ ?

ಗಿರಿಯಪ್ಪ—ಹೌದು ಸರ್ವೂ ! ಇಗೋ ನೀನೇ ನೋಡು. (ಚಿತ್ರವನ್ನು ಅವಳ ಕೈಗೆ ಕೊಡುವನು.)

ಸರ್ವಮಂಗಳೆ—(ಭೀತಿಯಿಂದ ತೆಗೆದುಕೊಂಡು ನೋಡಿ ನಕ್ಕು) ಇದು ಭಾರತ

ಬರೀ ಹೊಟ್ಟೆ, ಕಂಗಾಲ ಹುಡುಗರು ! ನಿನ್ನೀ ಉಡಿಗೆಗಳನ್ನ ಅವರಿಗಿತ್ತರೆ ಅವರೆಷ್ಟು ಸಂತೋಷಪಡಬಹುದು ! (ಎಲ್ಲವನ್ನೂ ಓರಿಗೆಯಾಗಿಟ್ಟು) ಮುದ್ದಜ್ಜಾ....ಮುದ್ದಜ್ಜಾ !

ಮುದ್ದಜ್ಜ—(ಪ್ರವೇಶಿಸಿ) ಬಂದೀನ್ರೀ ತಾಯೀ, ಏನು ಕರದರವ್ವಾ ?

ಸರ್ವಮಂಗಳೆ—ಅಜ್ಜಾ....ನೋಡಿದಿಯೇನಿಲ್ಲಿ ? ಹ್ಯಾಂಗಿದೆ ಅರಿವೆ ?

ಮುದ್ದಜ್ಜ—ಹಾಂ-ನೋಡಿದ್ನರವ್ವಾ. ಇದೇನಿಂದು ಅಂಗ್ಡೀ ಹಚ್ಚೀರೇನು ಇವನ್ನೆಲ್ಲಾ ತಕ್ಕೊಂಡು ?

ಸರ್ವಮಂಗಳೆ—ಅಲ್ಲ ಮುದ್ದಜ್ಜಾ. ಇವನ್ನೆಲ್ಲಾ ನಾನು ನಮ್ಮ ಬಡರೈತರ ಮಕ್ಕಳಿಗೆ ಕೊಡಬೇಕಂತಿದ್ದೇನೆ. ಪಾಪ, ಅವರಾದರೂ ಎಷ್ಟು ಹಿಗ್ಗಿಯಾರು ಇವನ್ನೆಲ್ಲ ತಕ್ಕೊಂಡು ? ಬರ್ತಿಯೇನು ನೀನೂ ಜತೆಗೆ ?

ಮುದ್ದಜ್ಜ—ಬರೀನ್ರವ್ವಾ. ಹಾಂ-ಇದೇನ್ರವ್ವಾ, ನೀವೀ ಭಾರೀ ಸೀರೆಗಳನ್ನೆಲ್ಲಾ ಅವ್ರೀಗೆ ತೆಗೆದಿಟ್ಟುಬಿಟ್ಟು ಇದೊಂದು ಬಿಳೀ ಪತ್ಲಾ ಉಟ್ಟುಬಿಟ್ರೆಲ್ಲಾ ?

ಸರ್ವಮಂಗಳೆ—ಸಾಲದೇನಪ್ಪಾ ಇಷ್ಟು ? ಮುದ್ದಜ್ಜಾ-ಶ್ರೀಮಂತಿಕೆ ನಾವು ಉಂಡುಟ್ಟು ಮೆರೆಯೋದ್ರಲ್ಲೇ ಇಲ್ಲಾ ; ದೇವ್ರು ನಮಗೆ ಕೊಟ್ಟಿರೋದು ಬೇರೆಯವರೀಗೆ ಕೊಡಬೇಕಂತ್ಲೇ !

ಮುದ್ದಜ್ಜ—(ದಿಟ್ಟಿಸಿ ನೋಡುತ್ತ) ನಿಲ್ಲರವ್ವಾ ! ಹಾಂಗೇ ಸ್ವಲ್ಪ ನಿಲ್ಲರವ್ವಾ. ತುಸೂ ನಿಮ್ಮನ್ನೋಡ್ಕೋತೀನಿ.

ಸರ್ವಮಂಗಳೆ—ಅದ್ಯಾಕಜ್ಜಾ ನನ್ನನ್ನೋಡ್ಕೋತಿ ? ಈ ವರೇಗೆ ನನ್ನನ್ನ ನೋಡಲೇ ಇಲ್ಲವೇನು ನೀನು ?

ಮುದ್ದಜ್ಜ—ನೋಡಿದ್ದನರವ್ವಾ. ಆದ್ರೆ ನಿಮ್ಮಂತೇ ಇರೋ ಇನ್ಯಾರೋ ತಾಯನ್ನ ನೋಡ್ದ ನೆಂಪಾಯ್ತು ನಂಗೇ-ಅದನ್ನೇ ನೆಂಪ ಮಾಡ್ಕೋ

ತೀನಿ, ನೆಂಪೇ ಅಗವೊಲ್ಲದು. ಅಷ್ಟೇ ತುಸು ನಿಲ್ಲರವ್ವಾ.... ಚಣ ಹೊತ್ತು ಜಾಪ್ಸಕೋತೀನಿ.

ಸರ್ವಮಂಗಳೆ—ಅಜ್ಜಾ.... ನಿನಗೇನೋ ಹುಚ್ಚು ಹಿಡಿದಿದೆ ಇಂದು ! ಆಗ್ಲಿ, ನೆನ್ಪುಮಾಡ್ಕೋ. ನಿನ್ನ ಇಷ್ಟದಂತೆಯೇ ನಿಲ್ಲುತ್ತೇನೆ. (ನಿಲ್ಲುವಳು. ಮುದ್ದಜ್ಜನು ನೋಡುತ್ತ ಜ್ಞಾಪಿಸಿಕೊಳ್ಳುತ್ತಲಿರುವನು.) ಹಾಂ .... ನೆನಪಿಗೆ ಬಂತೇನು ?

ಮುದ್ದಜ್ಜ—ಇಲ್ಲ ತಾಯೀ.... ಇನ್ನೂ ಇಲ್ಲ.

ಗಿರಿಯಪ್ಪ—(ಪ್ರವೇಶಿಸಿ) ಹಾಗಾದರೆ ನಾನು ಹೇಳಲೇನು ? (ಇಬ್ಬರೂ ಸರಿದು ನಿಲ್ಲುವರು) ಹೂಂ -- ಸರ್ವೂ, ಹಾಗೇ ನಿಲ್ಲು. ನಾನೊಂದು ಭಾವ ಚಿತ್ರವನ್ನ ತರುತ್ತೇನೆ. (ಓಡುವನು. ಮುದ್ದಜ್ಜನೂ ಸರ್ವಮಂಗಳೆಯೂ ಮಿಕಿಮಿಕಿ ನೋಡುತ್ತಲಿರುವರು. ಗಿರಿಯಪ್ಪನು ಓಡಿಬಂದು ಭಾವಚಿತ್ರವನು ಮುದ್ದಜ್ಜನ ಕೈಗೆ ಕೊಟ್ಟು) ಮುದ್ದಪ್ಪಾ, ಇದು ನೋಡು ! ಇದ್ಯಾರ ಚಿತ್ರ ಹೇಳು ?

ಮುದ್ದಜ್ಜ—(ನೋಡಿ) ನಮ್ಮಮ್ಮಾವ್ರದ್ದಲ್ಲೇನು ಬುದ್ಧೀ ? ಹಾಂ-ಇದನ್ನೇ ಕಂಡಿದ್ದೆ ನಿನ್ನೆ ರಾಮಯ್ಯಗೌಡ್ರ ಹತ್ರ. (ಹೋಗುವನು)

ಗಿರಿಯಪ್ಪ—ಸರಿ, ಚೆನ್ನಾಗಿಯೇ ಹೇಳಿದ. ಅದೇ ಚಿತ್ರದ ಇನ್ನೊಂದು ನಕ್ಲು ಇದು, ನಾನು ಈಗಲೇ ಕೊಂಡು ತಂದೆ.

ಸರ್ವಮಂಗಳೆ—ಹಾಂ ! ನನ್ನ ಚಿತ್ರ – ರಾಮಯ್ಯನ ಹತ್ರ !! ನೀವು ಕ್ರಯಕ್ಕೆ ತಂದರಾ ?

ಗಿರಿಯಪ್ಪ—ಹೌದು ಸರ್ವೂ ! ಇಗೋ ನೀನೇ ನೋಡು. (ಚಿತ್ರವನ್ನು ಅವಳ ಕೈಗೆ ಕೊಡುವನು.)

ಸರ್ವಮಂಗಳೆ—(ಭೀತಿಯಿಂದ ತೆಗೆದುಕೊಂಡು ನೋಡಿ ನಕ್ಕು) ಇದು ಭಾರತ

ಮಾತೆಯ ಚಿತ್ರ ! ವ್ಹಾ ! ಆ ಮುದ್ದಜ್ಜಗಂತೂ ಮುಪ್ಪಿನ ಕಣ್ಣು ಕಾಣುವುದಿಲ್ಲ. ನನಗೂ ಹಾಗೇ ತಿಳಿದಿರೇನು ನೀವು ?

ಗಿರಿಯಪ್ಪ—ಸರ್ವೂ ! ನಿನ್ನ ಮುದ್ದಜ್ಜಗೆ ಮುಪ್ಪಿನ ಕಣ್ಣು .... ಸರಿಯೇ ! ಆದರೆ ನನಗೆ ಕಣ್ಣು ಇನ್ನೂ ಸ್ವಚ್ಛವಾಗಿದೆ. ನೋಡು, ಆ ನಿಲುವು ಗನ್ನಡಿಯಲ್ಲಿ ನಿನ್ನ ರೂಪದೊಡನೆ ಈ ಭಾರತಮಾತೆಯ ಚಿತ್ರವನ್ನು ಹೋಲಿಸಿ ನೋಡು, ಒಂದಿಷ್ಟಾದರೂ ಭೇದವಿದೆಯೇ ಹೇಳು !

ಸರ್ವಮಂಗಳೆ—ಇದೆಲ್ಲವೂ ನಿಮ್ಮ ಪ್ರೇಮ ಅಷ್ಟೆ. ನಾನು ಅದೇ ನಿಮ್ಮ ಚರಣದಾಸಿಯು.

ಗಿರಿಯಪ್ಪ—ಅದಿರಲಿ ಪ್ರಿಯೇ ! ಹೇಳು, ನೀನೀಗ ಹೊರಟಿರುವುದೆಲ್ಲಿಗೆ ? ಯಾವುದೋ ಒಂದು ಪ್ರಯಾಣಕ್ಕೆ ಸಿದ್ಧವಾಗಿರುವಂತಿದೆಯಲ್ಲಾ ? ನನಗೆ ಹೇಳದೇ ನಿನ್ನ ಪ್ರಯಾಣದ ಸಿದ್ಧತೆಯೇನೇ ?

ಸರ್ವಮಂಗಳೆ—ಮತ್ತೆಲ್ಲಿಗೆ ? ಊರೊಳಕ್ಕೆ-ಅಷ್ಟೆ !

ಗಿರಿಯಪ್ಪ—ಊರೊಳಕ್ಕೆ ? ಹಾಗಾದರೆ ಈ ಸೀರೆ ಕುಪ್ಪಸ ಬಟ್ಟೆಬರೆಗಳನ್ನು ತೆಗೆದಿಟ್ಟ ಉದ್ದಿಶ್ಯ ?

ಸರ್ವಮಂಗಳೆ—ಇವನ್ನು ಊರಲ್ಲಿಯ ಬಡ ರೈತಕುಟುಂಬಕ್ಕೆ ಹಂಚುವುದಕ್ಕಾಗಿ.

ಗಿರಿಯಪ್ಪ—ಆಂ -- ಬಡ ರೈತಕುಟುಂಬಕ್ಕೆ ನಿನ್ನೀ ಬೆಲೆ ಬಾಳುವ ಬಟ್ಟೆಬರೆ ? ಸರ್ವೂ.... ನಿನಗೇನಾದರೂ ಹುಚ್ಚು ಹಿಡಿದಿದೆಯೇನೇ ? ನಾನು ಒಂದೇ ಒಂದು ಕ್ಷಣ ಬಾರದಿದ್ದಲ್ಲಿ ನೀನು ಎಷ್ಟು ಅನರ್ಥವನ್ನು ಮಾಡುತ್ತಿದ್ದೆಯೇ ?

ಸರ್ವಮಂಗಳೆ—ಅದ್ಯಾತಕ್ಕೆ ಪ್ರಿಯಾ ?

ಗಿರಿಯಪ್ಪ—ಮತ್ತೇನು ? ನೀನಿದೆಲ್ಲವನ್ನೂ ಅವರಿಗೆ ಕೊಟ್ಟು ನಾಳೆ ಏನು ಮಾಡಬೇಕೆಂದಿರುವಿ ?

ಸರ್ವಮಂಗಳ—ಪ್ರಿಯಾ ! ನಾಳೆಯ ನನ್ನ ನಿಮ್ಮ ಸುಖಕ್ಕಾಗಿಯೇ ನಾನಿಂದು ಇವನ್ನು ಅವರಿಗೆ ಧಾರೆ ಎರೆಯುತ್ತಿದ್ದೇನೆ. ಬಡವರು ಉಂಡುಟ್ಟು ಹರಸಿದರೆ ನಮ್ಮೀ ಹಿರಿಯರು ಬಾಳಿ ಬಂದ ಕುಟುಂಬಕ್ಕದು ಕಲ್ಯಾಣ. ನಮ್ಮ ಮುಂದಿನ ಸಂತತಿಗೆ ಶ್ರೇಯಸ್ಸು.

ಗಿರಿಯಪ್ಪ—ಸರ್ವೂ--ನಿನಗಿದು ಭ್ರಮೆ ! ಎಲ್ಲಿದೆ ನಮ್ಮ ಮುಂದಿನ ಸಂತತಿ ? ಮನೆಯ ಮುಂದಿನ ದೀಪವನ್ನು ಉಳಿಸುವ ಭಾಗ್ಯವು ನಮ್ಮಲ್ಲಿಲ್ಲ -- ನಾವು ದುರ್ದೈವಿಗಳು.

ಸರ್ವಮಂಗಳೆ—ನಮ್ಮದು ದುರ್ದೈವವಲ್ಲ ಪ್ರಿಯಾ, ಬಹು ಭಾಗ್ಯವಂತರು ನಾವು ! ಅದಕ್ಕೆಂದೇ ನಾನೀ ದಾನಧರ್ಮಕ್ಕೆ ಕೈಹಾಕಿರುವೆನು. ಇದೀಗ ನನ್ನ ಹೃದಯದಲ್ಲಿ ಹುಟ್ಟಿದೆ ಆಶೆ, ಅಂತರಂಗದ ಬಯಕೆ.

ಗಿರಿಯಪ್ಪ—ನಿನ್ನದು ಬಹು ಒಗಟಿನ ಮಾತು. ಸರ್ವೂ ! ಯಾವುದನ್ನೂ ಬಿಡಿಸಿ ಹೇಳದಿದ್ದರೆ ನಾನೇನೆಂದು ಗ್ರಹಿಸಬೇಕೇ ನಿನ್ನ ಹೃದಯದ ಇಂಗಿತವನ್ನು ? ಹೇಳು, ಅದೇನೆಂದು ಸ್ಪಷ್ಟವಾಗಿ ಹೇಳು.

ಸರ್ವಮಂಗಳೆ—ಹೆಣ್ಣುಮಕ್ಕಳಿಗೆ ಜನ್ಮದಲ್ಲಿ ಅದೊಂದು ವಿಶೇಷ ಬಯಕೆಯುಂಟಾಗುವ ಕಾಲವಿದೆ. ಅದನ್ನು ನಡೆಸಿಕೊಡುವುದು ಹಿರಿಯರ ಕರ್ತವ್ಯ. ಅದರಿಂದ ........

ಗಿರಿಯಪ್ಪ—(ನಕ್ಕು_ತಡೆಯಲಾರದೆ) ಹೆಣ್ಣುಮಕ್ಕಳಿಗೆ ಬಯಕೆ ಬರುವುದು ಗರ್ಭವತಿಯರಾದಾಗ. ಸರ್ವೂ, ನೀನು ಗರ್ಭಿಣಿಯೇನೇ ?

ಸರ್ವಮಂಗಳೆ—ಹಾಂ. (ತಲೆತಗ್ಗಿಸಿ ನಿಲ್ಲುವಳು.)

ಗಿರಿಯಪ್ಪ—(ನೋಡಿ ಹಿಗ್ಗಿ) ನಿಜ ನಿಜ. ಆ ಶೋಭೆಯೇ ಇದು. ಪ್ರಿಯೇ, ಹೇಳು ಹೇಳು, ಸತ್ಯವೇನೇ ಇದು ?

ಮಾತೆಯ ಚಿತ್ರ ! ಪ್ಪಾ ! ಆ ಮುದ್ದಜ್ಜಗಂತೂ ಮುಪ್ಪಿನ ಕಣ್ಣು ಕಾಣುವುದಿಲ್ಲ. ನನಗೂ ಹಾಗೇ ತಿಳಿದಿರೇನು ನೀವು ?

ಗಿರಿಯಪ್ಪ—ಸರ್ವೂ ! ನಿನ್ನ ಮುದ್ದಜ್ಜಗೆ ಮುಪ್ಪಿನ ಕಣ್ಣು .... ಸರಿಯೇ ! ಆದರೆ ನನಗೆ ಕಣ್ಣು ಇನ್ನೂ ಸ್ವಚ್ಛವಾಗಿದೆ. ನೋಡು, ಆ ನಿಲುವು ಗನ್ನಡಿಯಲ್ಲಿ ನಿನ್ನ ರೂಪದೊಡನೆ ಈ ಭಾರತಮಾತೆಯ ಚಿತ್ರವನ್ನು ಹೋಲಿಸಿ ನೋಡು, ಒಂದಿಷ್ಟಾದರೂ ಭೇದವಿದೆಯೇ ಹೇಳು !

ಸರ್ವಮಂಗಳೆ—ಇದೆಲ್ಲವೂ ನಿಮ್ಮ ಪ್ರೇಮ ಅಷ್ಟೆ. ನಾನು ಅದೇ ನಿಮ್ಮ ಚರಣದಾಸಿಯು.

ಗಿರಿಯಪ್ಪ—ಅದಿರಲಿ ಪ್ರಿಯೇ ! ಹೇಳು, ನೀನೀಗ ಹೊರಟಿರುವುದೆಲ್ಲಿಗೆ ? ಯಾವುದೋ ಒಂದು ಪ್ರಯಾಣಕ್ಕೆ ಸಿದ್ಧವಾಗಿರುವಂತಿದೆಯಲ್ಲಾ ? ನನಗೆ ಹೇಳದೇ ನಿನ್ನ ಪ್ರಯಾಣದ ಸಿದ್ಧತೆಯೇನೇ ?

ಸರ್ವಮಂಗಳೆ—ಮತ್ತೆಲ್ಲಿಗೆ ? ಊರೊಳಕ್ಕೆ-ಅಷ್ಟೆ !

ಗಿರಿಯಪ್ಪ—ಊರೊಳಕ್ಕೆ ? ಹಾಗಾದರೆ ಈ ಸೀರೆ ಕುಪ್ಪಸ ಬಟ್ಟೆಬರೆಗಳನ್ನು ತೆಗೆದಿಟ್ಟ ಉದ್ದಿಶ್ಯ ?

ಸರ್ವಮಂಗಳೆ—ಇವನ್ನು ಊರಲ್ಲಿಯ ಬಡ ರೈತಕುಟುಂಬಕ್ಕೆ ಹಂಚುವುದಕ್ಕಾಗಿ.

ಗಿರಿಯಪ್ಪ—ಆಂ -- ಬಡ ರೈತಕುಟುಂಬಕ್ಕೆ ನಿನ್ನೀ ಬೆಲೆ ಬಾಳುವ ಬಟ್ಟೆಬರೆ ? ಸರ್ವೂ.... ನಿನಗೇನಾದರೂ ಹುಚ್ಚು ಹಿಡಿದಿದೆಯೇನೇ ? ನಾನು ಒಂದೇ ಒಂದು ಕ್ಷಣ ಬಾರದಿದ್ದಲ್ಲಿ ನೀನು ಎಷ್ಟು ಅನರ್ಥವನ್ನು ಮಾಡುತ್ತಿದ್ದೆಯೇ ?

ಸರ್ವಮಂಗಳೆ—ಅದ್ಯಾತಕ್ಕೆ ಪ್ರಿಯಾ ?

ಗಿರಿಯಪ್ಪ—ಮತ್ತೇನು ? ನೀನಿದೆಲ್ಲವನ್ನೂ ಅವರಿಗೆ ಕೊಟ್ಟು ನಾಳೆ ಏನು ಮಾಡಬೇಕೆಂದಿರುವಿ ?

ಸರ್ವಮಂಗಳ—ಪ್ರಿಯಾ ! ನಾಳೆಯ ನನ್ನ ನಿಮ್ಮ ಸುಖಕ್ಕಾಗಿಯೇ ನಾನಿಂದು ಇವನ್ನು ಅವರಿಗೆ ಧಾರೆ ಎರೆಯುತ್ತಿದ್ದೇನೆ. ಬಡವರು ಉಂಡುಟ್ಟು ಹರಸಿದರೆ ನಮ್ಮೀ ಹಿರಿಯರು ಬಾಳಿ ಬಂದ ಕುಟುಂಬಕ್ಕದು ಕಲ್ಯಾಣ. ನಮ್ಮ ಮುಂದಿನ ಸಂತತಿಗೆ ಶ್ರೇಯಸ್ಸು.

ಗಿರಿಯಪ್ಪ—ಸರ್ವೂ--ನಿನಗಿದು ಭ್ರಮೆ ! ಎಲ್ಲಿದೆ ನಮ್ಮ ಮುಂದಿನ ಸಂತತಿ ? ಮನೆಯ ಮುಂದಿನ ದೀಪವನ್ನು ಉಳಿಸುವ ಭಾಗ್ಯವು ನಮ್ಮಲ್ಲಿಲ್ಲ -- ನಾವು ದುರ್ದೈವಿಗಳು.

ಸರ್ವಮಂಗಳೆ—ನಮ್ಮದು ದುರ್ದೈವವಲ್ಲ ಪ್ರಿಯಾ, ಬಹು ಭಾಗ್ಯವಂತರು ನಾವು! ಅದಕ್ಕೆಂದೇ ನಾನೀ ದಾನಧರ್ಮಕ್ಕೆ ಕೈಹಾಕಿರುವೆನು. ಇದೀಗ ನನ್ನ ಹೃದಯದಲ್ಲಿ ಹುಟ್ಟಿದೆ ಆಶೆ, ಅಂತರಂಗದ ಬಯಕೆ.

ಗಿರಿಯಪ್ಪ—ನಿನ್ನದು ಬಹು ಒಗಟಿನ ಮಾತು. ಸರ್ವೂ ! ಯಾವುದನ್ನೂ ಬಿಡಿಸಿ ಹೇಳದಿದ್ದರೆ ನಾನೇನೆಂದು ಗ್ರಹಿಸಬೇಕೇ ನಿನ್ನ ಹೃದಯದ ಇಂಗಿತವನ್ನು ? ಹೇಳು, ಅದೇನೆಂದು ಸ್ಪಷ್ಟವಾಗಿ ಹೇಳು.

ಸರ್ವಮಂಗಳೆ—ಹೆಣ್ಣುಮಕ್ಕಳಿಗೆ ಜನ್ಮದಲ್ಲಿ ಅದೊಂದು ವಿಶೇಷ ಬಯಕೆಯುಂಟಾಗುವ ಕಾಲವಿದೆ. ಅದನ್ನು ನಡೆಸಿಕೊಡುವುದು ಹಿರಿಯರ ಕರ್ತವ್ಯ. ಅದರಿಂದ ........

ಗಿರಿಯಪ್ಪ—(ನಕ್ಕು_ತಡೆಯಲಾರದೆ) ಹೆಣ್ಣುಮಕ್ಕಳಿಗೆ ಬಯಕೆ ಬರುವುದು ಗರ್ಭವತಿಯರಾದಾಗ. ಸರ್ವೂ, ನೀನು ಗರ್ಭಿಣಿಯೇನೇ ?

ಸರ್ವಮಂಗಳೆ—ಹಾಂ. (ತಲೆತಗ್ಗಿಸಿ ನಿಲ್ಲುವಳು.)

ಗಿರಿಯಪ್ಪ—(ನೋಡಿ ಹಿಗ್ಗಿ) ನಿಜ ನಿಜ. ಆ ಶೋಭೆಯೇ ಇದು. ಪ್ರಿಯೇ, ಹೇಳು ಹೇಳು, ಸತ್ಯವೇನೇ ಇದು ?

ಸರ್ವಮಂಗಳೆ--ಪ್ರಿಯಾ, ನನಗೀಗ ನಾಲ್ಕು ತಿಂಗಳು.

ಗಿರಿಯಪ್ಪ—ಆನಂದ ! ಪರಮಾನಂದ ! ಸರ್ವೂ, ಈ ವರೆಗೂ ಈ ವಿಚಾರ ವನ್ನು ನೀನು ನನಗೆ ಹೇಳುವುದಿಲ್ಲವೇನೇ ? ಆಹಾ ! ಎಂತಹ ಸಂತೋಷದ ವಿಚಾರವನ್ನು ತಿಳಿಸಿದೆಯೇ ನೀನು !

ರಾಗ_ಖಂಬಾಚತಿ_ತ್ರಿತಾಲ

ಸುರಸುಂದರೀ – ಸ್ಮರಮೋಹಿನೀ |
ವರಶುಭಸಂದೇಶದೆ ನಾ ತಣಿದೇ ದೇವಿ || ಧೃ ||
ಭಾನು ಬೇಗೆಲೀ ಕಂದಿದಾ ತಟ |
ಘನ ವರ್ಷದಿಂದೆ ತುಂಬಿದಂತಾದೇ ನಾ ದೇವಿ || ೧ ||

ಮುದ್ದಪ್ಪಾ–ಏ ಮುದ್ದಪ್ಪಾ ! ಬಾರೋ ಇಲ್ಲೀ. (ಅವನು ಬರುತ್ತಲೇ) ತೆಗೆದುಕೋ ಈ ಶಾಲನ್ನು.

ಮುದ್ದಜ್ಜ—ಇದ್ಯಾತಕ್ರೀ ಸಾವಕಾರ್ರಾ ಈ ಶಾಲು ಮುದಕಂಗೇ ! ಏನಿದು ನನ್ನ ಗೇಲೀ ಮಾಡ್ತೀರೇನು ?

ಗಿರಿಯಪ್ಪ—ಇಲ್ಲ ಮುದ್ದಪ್ಪಾ, ಇದು ನಿಜವಾಗಿಯೂ ಗೇಲಿಯಲ್ಲ. ಸಂತೋಷ ದಿಂದಲೇ ನಾನಿದನ್ನು ನಿನಗೆ ಕೊಡುತ್ತಲಿದ್ದೇನೆ; ತೊಟ್ಟುಕೋ. ಅಜ್ಜಾ ! ಇಂದು ನನ್ನ ಜನ್ಮದಲ್ಲೇ ಸಂತೋಷದ ದಿನ, ಆನಂದದ ಕಾಲ. ಎಲ್ಲಿ ನನ್ನ ಮನೆ ನನ್ನ ಕಾಲಕ್ಕೇ ಅಂತ್ಯವಾಗುತ್ತದೋ ಅಂತಿದ್ದೆ ನಾನು, ಆದರೆ ಹಾಂಗಿಲ್ಲ. ಪರಮೇಶ್ವರ ನನ್ನ ಮೇಲೆ ಕೃಪೆ ಇಟ್ಟ. ನನ್ನ ಸರ್ವೂ ಈಗ ಗರ್ಭವತಿಯಾಗಿದ್ದಾಳಪ್ಪಾ, ನನಗೆ ಸಂತಾನವಾಗ ತ್ತಜ್ಜಾ. ..ಮಕ್ಕಳಿಲ್ಲದ ನನ್ನ ಮನೇಲಿ ಭಾಗ್ಯದ ತೊಟ್ಟಿಲು ಕಟ್ಟತ್ತೆ.

ಮುದ್ದಜ್ಜ—ಆಂ–ಹೌದೇ ನನ್ನೊಡೆಯಾ! ಗುರು ದೊಡ್ಡವ ನನ್ನ ಧಣಿಯೇ ! ಆನಂದಾತು !!

ಗಿರಿಯಪ್ಪ—ಹಾಂ - ಮುದ್ದಜ್ಜಾ ! ಹಾಕ್ಕೋ ಆ ಶಾಲನ್ನ ಮೈಮೇಲೆ, ತಕ್ಕೋ ಈ ಕೋಟು.

ಮುದ್ದಜ್ಜ—ಅಬ್ಯಾಕ್ ಗುರುವೇ ಈ ಮುದಕಂಗೇ ? ಬಿಡ್ರಿ ನನ್ನೊಡೆಯಾ ! (ಸರಿದು ನಿಲ್ಲುವನು.)

ಗಿರಿಯಪ್ಪ—(ಎಳೆತಂದು) ಹಾಂ–ಒಲ್ಲೆ ಅನ್ನತೀಯೇನು ? ನನ್ನ ಆಣೆ ಇದೆ. ತೊಟ್ಕೋ .... ನನ್ನಿದಿರಿನಲ್ಲೇ ತೊಟ್ಕೋಬೇಕು. (ಕೋಟು ತೊಡಿಸಿ, ಶಾಲನ್ನು ಹಾಕಿ) ಇಗೋ ಕನ್ನಡ್ಕ (ಇಟ್ಟು) ತಕೋ ಈ ವಾಚು (ತೊಡಿಸಿ) ಹಾಂ–ಈ ಶಲ್ಲೆಯನ್ನು ತಲೆಗೆ ಸುತ್ತು (ಸುತ್ತಿಸಿ) ಹಿಡೀ ಈ ಕೋಲು (ಕೊಟ್ಟು) ಅಹಹಹಾ ! ಹ್ಯಾಗ್ಕಾಣ್ತಿಯೋ ಮುದ್ದಜ್ಜಾ ನೀಸೀಗ ?

ಮುದ್ದಜ್ಜ—ವಾವ್ವಾ ! ಬಲು ಚೆನ್ನಾಗಿ ಕಂಡೇನಲ್ವಾ ಬುದ್ದೀ - ಅಗ್ಸರ ಕುದ್ರೀ ಕಂಡ್ಹಾಂಗೆ !

ಸರ್ವಮಂಗಳೆ—(ಎಡಗಡೆಯ ರಟ್ಟೆ ಹಿಡಿದು) ಅಜ್ಜಾ .... ಈ ಮನೆಗೆ ನೀನೇ ಹಿರಿಯ ಯಜಮಾನ. ಹೇಳು, ಈ ಸಂತೋಷದ ಸಮಯದಲ್ಲಿ ನಿನ್ನ ಎದೇ ಆನಂದದಿಂದ ಉಕ್ಕತಾ ಇರ್ವಾಗ ನೀನೊಮ್ಮೆ ಹೇಳು - ನಿನ್ನಾ ಅಮೃತವಾಣಿಯಿಂದ - ಈ ಮನೇಲಿ ತೊಟ್ಲು ಕಟ್ಲೀ ಅಂತ, ಈ ಮನೇ ದೀಪ ಚಿರಕಾಲ ಆರದೇ ಇರ್ಲಿ ಅಂತ. (ಕೈ ಕುಲುಕುವಳು)

ಗಿರಿಯಪ್ಪ—ಹಾಂ–ಹೇಳಜ್ಜಾ ಅದೇ ದೈವವಾಣಿ ! (ಬಲಗೈ ರಟ್ಟೆ ಹಿಡಿದು ಕುಲುಕುವನು.)

ಮುದ್ದಜ್ಜ—ಹಾಂ ಹಾಂ–ಆಗಲರಪ್ಪಾ ಅಂತೇನೆ. ತಾಯೀ, ನೀವು ಭಾಗ್ಯ ವಂತ ಮಕ್ಳನ್ನ ಪಡೀರಿ; ಅವನ್ನ ಕಂಡು ನಾನೂ ಹಿಗ್ಗತೇನೆ. ಹ್ಯಾಂಗೂ ಈ ಮುದ್ಕಂಗೆ ಮುಂದೆ ಕಪಾಲಪೂಜೆ ಮಾಡೋಕಾದ್ರೂ ಬೇಕಲ್ಲಾ !

ಗಿರಿಯಪ್ಪ—ಮುದ್ದಜ್ಜಾ ! ಈ ಮಾತು ನನ್ಗೇಯೇನು ? ಹೌದು ಮುದ್ದಜ್ಜಾ– ನಿನ್ತೋಳಮೇಲೇ ಆಡಿ, ನಿನ್ನ ಭುಜದ ಮೇಲೇ ಕುಣ್ದು ಕೊನೆಗೆ ನಿನ್ನ ಕಪಾಲಕ್ಕೇ ಕೈಹಚ್ಚಿದ ಕೃತಘ್ನ ನಾನು. ಬೇಡ ಮುದ್ದಜ್ಜಾ - ನನ್ನ ಸರ್ವೂ ಹೊಟ್ಟೇಲಿ ಅಂಥಾ ಕೃತಘ್ನ ಮಕ್ಳು ಹುಟ್ಟದೇ ಇರ್ಲಿ.

ಸರ್ವಮಂಗಳೆ—ಪ್ರಿಯಾ, ನನಗೀಗ ನಾಲ್ಕು ತಿಂಗಳು.

ಗಿರಿಯಪ್ಪ—ಆನಂದ ! ಪರಮಾನಂದ ! ಸರ್ವು, ಈ ವರೆಗೂ ಈ ವಿಚಾರವನ್ನು ನೀನು ನನಗೆ ಹೇಳುವುದಿಲ್ಲವೇನೇ ? ಆಹಾ ! ಎಂತಹ ಸಂತೋಷದ ವಿಚಾರವನ್ನು ತಿಳಿಸಿದೆಯೋ ನೀನು !

ರಾಗ_ಖಂಬಾವತಿ_ತ್ರಿತಾಲ

ಸುರಸುಂದರೀ – ಸ್ಮರಮೋಹಿನೀ |
ವರಶುಭಸಂದೇಶದೆ ನಾ ತಣಿದೇ ದೇವಿ || ಧೃ ||
ಭಾನು ಬೇಗೆಲೀ ಕಂದಿದಾ ತಟ |
ಘನ ವರ್ಷದಿಂದೆ ತುಂಬಿದಂತಾದೇ ನಾ ದೇವಿ || ೧ ||

ಮುದ್ದಪ್ಪಾ—ಏ ಮುದ್ದಪ್ಪಾ ! ಬಾರೋ ಇಲ್ಲೀ. (ಅವನು ಬರುತ್ತಲೇ) ತೆಗೆದುಕೋ ಈ ಶಾಲನ್ನು.

ಮುದ್ದಜ್ಜ—ಇದ್ಯಾತಕ್ರೀ ಸಾವಕಾರ್ರಾ ಈ ಶಾಲು ಮುದಕಂಗೇ ! ಏನಿದು ನನ್ನ ಗೇಲೀ ಮಾಡ್ತೀರೇನು ?

ಗಿರಿಯಪ್ಪ—ಇಲ್ಲ ಮುದ್ದಪ್ಪಾ, ಇದು ನಿಜವಾಗಿಯೂ ಗೇಲಿಯಲ್ಲ. ಸಂತೋಷದಿಂದಲೇ ನಾನಿದನ್ನು ನಿನಗೆ ಕೊಡುತ್ತಲಿದ್ದೇನೆ; ತೊಟ್ಟುಕೋ. ಅಜ್ಜಾ ! ಇಂದು ನನ್ನ ಜನ್ಮದಲ್ಲೇ ಸಂತೋಷದ ದಿನ, ಆನಂದದ ಕಾಲ. ಎಲ್ಲಿ ನನ್ನ ಮನೆ ನನ್ನ ಕಾಲಕ್ಕೇ ಅಂತ್ಯವಾಗುತ್ತದೋ ಅಂತಿದ್ದೆ ನಾನು, ಆದರೆ ಹಾಂಗಿಲ್ಲ. ಪರಮೇಶ್ವರ ನನ್ನ ಮೇಲೆ ಕೃಪೆ ಇಟ್ಟ. ನನ್ನ ಸರ್ವು ಈಗ ಗರ್ಭವತಿಯಾಗಿದ್ದಾಳಪ್ಪಾ, ನನಗೆ ಸಂತಾನವಾಗತ್ತಜ್ಜಾ. ..ಮಕ್ಕಳಿಲ್ಲದ ನನ್ನ ಮನೇಲಿ ಭಾಗ್ಯದ ತೊಟ್ಟಿಲು ಕಟ್ಟತ್ತೆ.

ಮುದ್ದಜ್ಜ—ಅಂ_ಹೌದೇ ನನ್ನೊಡೆಯಾ ! ಗುರು ದೊಡ್ಡವ ನನ್ನ ಧಣಿಯೇ ! ಆನಂದಾತು !!

ಗಿರಿಯಪ್ಪ—ಹಾಂ - ಮುದ್ದಜ್ಜಾ ! ಹಾಕ್ಕೋ ಈ ಶಾಲನ್ನ ಮೈಮೇಲೆ, ತಕ್ಕೋ ಈ ಕೋಟು.

ಮುದ್ದಜ್ಜ—ಅಬ್ಯಾಕ್ ಗುರುವೇ ಈ ಮುದಕಂಗೇ ? ಬಿಡ್ರಿ ನನ್ನೊಡೆಯಾ ! (ಸರಿದು ನಿಲ್ಲುವನು.)

ಗಿರಿಯಪ್ಪ—(ಎಳೆತಂದು) ಹಾಂ-ಒಲ್ಲೆ ಅನ್ನತೀಯೇನು ? ನನ್ನ ಆಣೆ ಇದೆ. ತೊಟ್ಕೋ .... ನನ್ನಿದಿರಿನಲ್ಲೇ ತೊಟ್ಕೋಬೇಕು. (ಕೋಟು ತೊಡಿಸಿ, ಶಾಲನ್ನು ಹಾಕಿ) ಇಗೋ ಕನ್ನಡ್ಕ (ಇಟ್ಟು) ತಕೋ ಈ ವಾಚು (ತೊಡಿಸಿ) ಹಾಂ-ಈ ಶಲ್ಲೆಯನ್ನು ತಲೆಗೆ ಸುತ್ತು (ಸುತ್ತಿಸಿ) ಹಿಡೀ ಈ ಕೋಲು (ಕೊಟ್ಟು) ಅಹಹಹಾ ! ಹ್ಯಾಗ್ಕಾಣ್ತಿಯೋ ಮುದ್ದಜ್ಜಾ ನೀಸೀಗ ?

ಮುದ್ದಜ್ಜ—ವಾವ್ವಾ ! ಬಲು ಚೆನ್ನಾಗಿ ಕಂಡೇನಲ್ವಾ ಬುದ್ದೀ - ಅಗ್ಸರ ಕುದ್ರೀ ಕಂಡ್ಹಾಂಗೆ !

ಸರ್ವಮಂಗಳೆ—(ಎಡಗಡೆಯ ರಟ್ಟೆ ಹಿಡಿದು) ಅಜ್ಜಾ .... ಈ ಮನೆಗೆ ನೀನೇ ಹಿರಿಯ ಯಜಮಾನ. ಹೇಳು, ಈ ಸಂತೋಷದ ಸಮಯದಲ್ಲಿ ನಿನ್ನ ಎದೇ ಆನಂದದಿಂದ ಉಕ್ಕತಾ ಇರ್ವಾಗ ನೀನೊಮ್ಮೆ ಹೇಳು - ನಿನ್ನಾ ಅಮೃತವಾಣಿಯಿಂದ - ಈ ಮನೇಲಿ ತೊಟ್ಲು ಕಟ್ಲೀ ಅಂತ, ಈ ಮನೇ ದೀಪ ಚಿರಕಾಲ ಆರದೇ ಇರ್‍ಲೀ ಅಂತ. (ಕೈ ಕುಲುಕುವಳು)

ಗಿರಿಯಪ್ಪ—ಹಾಂ-ಹೇಳಜ್ಜಾ ಅದೇ ದೈವವಾಣಿ ! (ಬಲಗೈ ರಟ್ಟೆ ಹಿಡಿದು ಕುಲುಕುವನು.)

ಮುದ್ದಜ್ಜ—ಹಾಂ ಹಾಂ-ಆಗಲರಪ್ಪಾ ಅಂತೇನೆ. ತಾಯೀ, ನೀವು ಭಾಗ್ಯವಂತ ಮಕ್ಳನ್ನ ಪಡೀರಿ; ಅವನ್ನ ಕಂಡು ನಾನೂ ಹಿಗ್ಗತೇನೆ. ಹ್ಯಾಂಗೂ ಈ ಮುದ್ಕಂಗೆ ಮುಂದೆ ಕಪಾಲಪೂಜೆ ಮಾಡೋಕಾದ್ರೂ ಬೇಕಲ್ಲಾ !

ಗಿರಿಯಪ್ಪ—ಮುದ್ದಜ್ಜಾ ! ಈ ಮಾತು ನನ್ಗೇಯೇನು ? ಹೌದು ಮುದ್ದಜ್ಜಾ-ನಿನ್ತೋಳಮೇಲೇ ಆಡಿ, ನಿನ್ನ ಭುಜದ ಮೇಲೇ ಕುಣ್ದು ಕೊನೆಗೆ ನಿನ್ನ ಕಪಾಲಕ್ಕೇ ಕೈಹಚ್ಚಿದ ಕೃತಘ್ನ ನಾನು. ಬೇಡ ಮುದ್ದಜ್ಜಾ - ನನ್ನ ಸರ್ವೂ ಹೊಟ್ಟೇಲಿ ಅಂಥಾ ಕೃತಘ್ನ ಮಕ್ಕು ಹುಟ್ಟದೇ ಇರ್‍ಲಿ.

ಮುದ್ದಜ್ಜ--ಇಲ್ಲ ಸಾವ್ಕಾರ್ರೇ....ಏನೋ ಒಂದು ಅಂದಬಿಟ್ಟೆ. ತಮಗಂವ ಮಾತಲ್ಲಾ ನಾನು. ತಾವವನ್ನು ಮನಸ್ಸಿಗಚ್ಕೋಬ್ಯಾಡ್ರಿ. ಹಾಂ-ಏನ್ರವ್ಮಾ! ಈಗಲಾದ್ರೂ ಹೊರಡೋಣವೇನು ಬಟ್ಟೆ ಹಂಚಲಿಕ್ಕೆ?

ಗಿರಿಯಪ್ಪ—ಹಾಂ-ಹಂಚೋಣ. ಅವುಗಳ ಜತೆಗೆ ಇನ್ನೂ ಅಷ್ಟು ಇರ್ಲಿ... ನಾನೂ ಬರ್ತೇನೆ. (ಎಂದು ಪೆಟ್ಟಿಗೆಯಿಂದ ಮತ್ತಷ್ಟು ಬಟ್ಟೆಬರೆಗಳನ್ನು ತೆಗೆದು ಕೊಂಡು)

## ಡಾಯಲಾಗ್

ಗಿರಿಯಪ್ಪ—ಬಾರೆ ಬಾರೆ ಗುಣಗಂಭೀರೆ ಮನ್ಮನೋಹರೇ।
ಹೃದಯ ತಣಿವ ತೆರದೆ ವಸನ ನೀಡು ಸುಂದರೀ ॥ ಧ್ರು ॥

ಸರ್ವಮಂಗಳೆ—ಒಡಲ ಹಸಿದ ನೋವಾ। ಬಡವರೆದೆಯ ಭಾವಾ।
ನೋಡಿ ನೋವ ತಣಿಸಿ ಭಾವ ರಮಿಸೆ ಸೇವೆಗೈವಾ ॥

ಮುದ್ದಜ್ಜ—ತಣಿದ ಎದೆಯ ವೀಣೆಯಿಂದ ಶಾಂತಿಗೀತೆ ಹೊಮ್ಮಲೀ।
ಘನತೆಯಿಂದೆ ಬಾಳಿ ಬೆಳೆದ ಮನೆಯು ಸುಖದೆ ನಲಿಯಲೀ ॥ ೧ ॥

[ತೆರೆ ಬೀಳುವುದು]

## ನೋಟ ೭

[ ಶಿವಗ್ರಾಮದ ಒಂದು ಬೀದಿ ]

ರಾಮಯ್ಯ—ಇದೇನು - ಒಮ್ಮಿಂದೊಮ್ಮೆಗೇ ಈ ಪರಿವರ್ತನ ಸಾವ್ಕಾರ್ರಲ್ಲಿ? ನಿನ್ನೆ ನಾನು ಅವರೊಡನೆ ರೈತರ ಸಹಕಾರ ಸಂಘದ ಸಹಾಯದ ಬಗ್ಗೆ ಚಂದಾ ಕೇಳಲು ಹೋದರೆ ಒಂದು ಜಿಕ್ಕಾಸನ್ನೂ ಕೊಡದೆ ಅಸಂಬದ್ಧ ವಾಗಿ ಬಿರುನುಡಿಗಳನ್ನಾಡಿ ಕಳುಹಿಸಿದ ಇವರು ಇಂದೇ ಏಕಾಏಕಿ ಈ ಧರ್ಮದ ದಾರಿಯನ್ನು ತುಳಿದ ಕಾರಣವೇನು? ಸಾಹುಕಾರರಿಗೆ

ತಮ್ಮ ಕೃತಕರ್ಮದ ಬಗ್ಗೆ ಪಶ್ಚಾತ್ತಾಪ ಉಂಟಾಗಿರಬಹುದೇ? ಅಥವಾ ಇದೇನಾದ್ರೂ ಯಾವನೊಬ್ಬ ಮಹಾತ್ಮನ ಉಪದೇಶದ ಮಹತ್ವವಿರಬಹುದೇ? ಯಾವುದೂ ತಿಳಿಯಲಿಲ್ಲ. ಸಾಹುಕಾರರು ನನ್ನ ಕೇಳಿಕೆಯಂತೆ ನಡೆಯಿಸಿಕೊಟ್ಟಿದ್ದರೆ ಎಂತಹ ಮಹದುಪಕಾರವಾಗುತ್ತಿತ್ತು? ನಾನಾಗಲೇ ಕಾಲೇಜಿಗೆ ಶರಣುಹೊಡೆದು ಬಂದು ಏಳು ತಿಂಗಳು ಕಳೆದುಹೋಯ್ತು. ಆದರೆ ಯಾವ ಕಾರ್ಯವೂ ಕೊನೆಮುಟ್ಟಲಿಲ್ಲ. ನನ್ನ ತತ್ವವನ್ನು ಮಾನಿಸುವವರಲ್ಲಿ ಹಣವಿಲ್ಲ, ಹಣವಿರುವವರಲ್ಲಿ ಧರ್ಮಬುದ್ಧಿಯಿಲ್ಲ. ಈಗ ಇನ್ನೇನು ಮಾಡಲಿ? ಹೇಗೂ ಕಾರ್ಯವನ್ನು ಕೊನೆಮುಟ್ಟಿಸದೆ ಗತ್ಯಂತರವೇ ಇಲ್ಲ. ಇನ್ನು ಈ ಶ್ರೀಮಂತರನ್ನು ಕಾದು ಉಪಯೋಗವೇ ಇಲ್ಲ. ನನ್ನ ಬಡ ರೈತರೇ ನನಗೆ ಸಾಕು; ಇವರಿಂದಲೇ ಸಾಧ್ಯವಾದಷ್ಟು ದ್ರವ್ಯಸಂಚಯವನ್ನು ಮಾಡಿ ಕಾರ್ಯವನ್ನು ಸಾಧ್ಯವಾದಷ್ಟು ಬೇಗ ರೂಪಕ್ಕೆ ತರಲೇಬೇಕು. ಓಹೋ – ಇದ್ಯಾರು ಗಂಗವ್ವ! ಇವಳೆಲ್ಲಿಗೆ ಹೋಗಿದ್ದಾಳು ಈ ಉರಿಬಿಸಿಲಿನಲ್ಲಿ? ಅಕ್ಕಾ, ಎಲ್ಲಿಗೆ ಹೋಗಿದ್ದೆ?

ಗಂಗವ್ವ—ತರಕಾರೀ ಮಾರಲಿಕ್ಕೆ ಶಿರುವಂತಿಗೆ ಹೋಗಿದ್ದೆನಣ್ಣಾ. ಬೇಗ ಎಲ್ಲವೂ ಖರ್ಚಾಯ್ತು, ತಿರುಗಿ ಬಂದುಬಿಟ್ಟೆ.

ರಾಮಯ್ಯ—ಓಹೋ! ಇಂದು ಸಂಕಜ್ಜ ಚನ್ನಪ್ಪನವರಿಗೆ ರಜೆಯೇನು ಹಾಗಾದರೆ? ಒಳ್ಳೇದು ಸತ್ಯ ಹೇಳವ್ವಾ-ಎಷ್ಟು ಸಿಕ್ಕಿತು ಇಂದು ಸಂತೆಯಲ್ಲಿ?

ಗಂಗವ್ವ—ಖರ್ಚು ಕಳದು ಎರಡು ರೂಪಾಯ್ಯಾ ಆರಾಣೆ ಸಿಕ್ತು. ಸುಳ್ಯಾಕಣ್ಣಾ ನಿನ್ನಲ್ಲಿ?

ರಾಮಯ್ಯ—ಅದೇನಕ್ಕಾ ಖರ್ಚು ನಿನ್ನದು ಶಿರವಂತೇಲಿ?

ಗಂಗವ್ವ—ಇಂದು ಮಾವ ಅಳಿಯಂದಿರಿಬ್ರೂ ಹೊಲಕ್ಕೆ ಕರ್ಕೆ ಆಗಿಯೋಕೆ ಹೋಗಿದ್ದಾರೆ. ಒಂದು ಹೊಲದಾಗಂತೂ ಕರ್ಕೆ ಬೆಳ್ದು ಪೈರೇ ಚೆನ್ನಾಗಾಗೊಲ್ಲ; ಆದ್ರಿಂದ ಅವ್ರೇ ಕೆಲ್ಸಕ್ಕೆ ನಿಂತ್ರು. ನಾನು ಕೂಲಿ ಹೆಂಗಸ

ರಿಬ್ರನ್ನ ಕರಕೊಂಡು ಹೋಗಬೇಕಾಯ್ತು. ಆದ್ರಿಂದ ಅವರ ಕೂಲಿ ಹತ್ತಾಣೆ ಕೊಟ್ಟುಬಿಟ್ಟೆ, ಕೈಲಿ ಇಷ್ಟು ಉಳೀತು.

ರಾಮಯ್ಯ—ಹಾಂ---ಹಾಗಾದ್ರೆ ಹೀಗೇ ದುಡ್ದರೆ ಇನ್ನು ಎರಡು ಮೂರು ವರ್ಷ ಗಳಲ್ಲೇ ನಿಮ್ಮ ಸಾಲ ಎಲ್ಲಾ ಬಗೆಹರ್ದು ನಿಮ್ಮ ಹೊಲಾ ನಿಮ್ಮ ಕೈಗೆ ಬರ್ಲಿಕ್ಕಡ್ಡಿ ಇಲ್ಲಾ. ದುಡೀರಿ–ದುಡೀರವ್ವಾ, ದೇವ್ರು ಒಳ್ಳೇದು ಮಾಡ್ಲಿ.

ಗಂಗವ್ವ—ಹೊಲದ್ದು ಒಂದೇ ಚಿಂತೆ ಅಲ್ಲಣ್ಣಾ ನಮ್ಮಪ್ಪಗೆ, ಈ ಕಡೆ ಹೊಲ್ದೂ ನೋಡ್ಕೋಬೇಕು, ಆ ಕಡೆ ಮೈನಾಲ್ದೂ ಆಷ್ಟಾದೆ. ಹೀಗಾಗಿ ಅನ್ನಾ ನೀರಿಲ್ಲದೆ, ನಿದ್ದೆ ಇಲ್ದೇ ದುಡೀತಿದ್ದಾರವ್ರು. ರಾತ್ರೆ ಎಲ್ಲಾ ತರ್ನಾರಿ ಗಿಡದ ಆರೈಕೆ, ಹಗ್ಲು ಹೊಲ್ದ ಕೆಲ್ಸಾ. ಬರ್ತೇನಣ್ಣಾ ಹೊತ್ತಾಯ್ತು. (ಹೋಗುವಳು)

ರಾಮಯ್ಯ—ಹೋಗು, ಹೋಗವ್ವಾ .... ಬಿಸಿಲಿಂದ ಭೂಮಿ ಸುಡ್ತಾ ಇದೆ. ಪಾಪ, ಸಂಕಣ್ಣನೀಗೆ ಈ ಎರಡೇ ಚಿಂತೆಯಲ್ಲ -- ಅದ್ರ ಜತೇಗೆ ಮಗಳ ಮದ್ವೇ ಚಿಂತೇನೂ ಬಹು ಹೆಚ್ಚಾಗಿದ್ಹಾಂಗಿದೆ. ಪಾಪ, ಮುದುಕ ಹೇಳ್ಹಾರ, ಹೇಳ್ದೇ ಇರಲಾರ. ಶಿವನೇ ಗತಿ ಅಂತ ದುಡಿಯೋದೊಂದು ನೋಡ್ಕೊಂಡಿದ್ದಾನೆ. ದೇವರವನ ಕಷ್ಟಕ್ಕೆ ಫಲ ಕೊಡಲಿ.

[ ತೆರೆ ಬೀಳುವುದು ]

## ನೋಟ ೮

[ ವಿಶಾಲವಾದ ಕರಿಕೆಯ ಹೊಲ. ಮಧ್ಯಾಹ್ನದ ಉರಿಬಿಸಿಲ ಕಾಲ. ಚನ್ನನೂ ಸಂಕಪ್ಪನೂ ನೆಲವನ್ನಗೆಯುತ್ತಿರುವರು. ]

ಚನ್ನ—(ಉಸ್ಸೆಂದು) ಏನು ಬಿಸ್ಲು ಮಾವಾ ಇದು ! ತಾಪ ಬಹಳ ಆಗ್ತಾ ಇದೆ .... ನೆಲ್ದ ಮ್ಯಾಲೆ ಕಾಲಿಡೋಕೇ ಬರೋದಿಲ್ಲ. ........ ನಿಮ್ಗೇನು ಆಯಾಸಾಗೋದಿಲ್ಲೇನು ?

ಸಂಕಪ್ಪ—(ನಗುತ್ತ) ವಾರೇ ಗಂಡಸೇ–ಅದೇನಾಯಾಸ್ಪೋ? ನಿನ್ನ ಹಾಂಗ ನಾನೂ ಗಳಿಗೇಗೆ ಹತ್ತ ಸಲಾ ಎಲೀ ಅಡ್ಕೀ ಜಗೀತಾ ಕುಂತಬಿಟ್ರೆ ಆಯ್ತುಲ್ಲಾ ಕೆಲ್ಸಾ! (ಮೇಘಘರ್ಜನೆಯಾಗುವುದು) ಹಾಂ -- ಅಗಾ ಕೇಳ್ಬಿಯೇನು ಬಾನಾಗ ಗುಡಗೋದು? ನಾವು ಜೇಗ ನೆಲಾ ಹಸನ ಮಾಡ್ಕೊಳ್ಳದೇ ಇದ್ರೆ ಈ ವರ್ಷ ಈ ಹೊಲ್ದಲ್ಲಿ ಪೈರು ಬೆಳೆಯೋದಿಲ್ಲಾ.

ಚನ್ನ—....ಬರೇ ಗುಡಗತದಷ್ಟೆ. ಮಳೆಯೇನೂ ಬರೋಹಾಂಗಿಲ್ಲ. ಹೆಚ್ಚಂದ್ರೆ ಇನ್ನು ನಾಲ್ಕು ದಿವ್ಸದ ಕೆಲ್ಸ ಅಷ್ಟೇ ತಾನೇ.......ಮಾಡಕೊಂಡರಾತು. ಇಂದಂತೂ ನಾನು ಸೋತು ಹುಣ್ಣಾಗಿ ಬಿಟ್ಟೆ.

ಸಂಕಪ್ಪ—ವ್ಹಾ--ಈ ಮುದ್ಕನ ರಟ್ಟೇ ಕಸೂ ನಿಮ್ಮಂಥಾ ಹರೇದ ಹುಡ್ಗರೀಗಿಲ್ಲಾ ಅಂತ ಅಂದ್ರೆ ಏನನ್ನಬೇಕು? ಹೋಗು ಹೋಗು, ಆ ನೆರಳಲ್ಲಿ ಕೂತುಕೋ. (ಚನ್ನನು ಹೋಗುವನು. ಸಂಕಪ್ಪನು ಕೆಲಸ ಮಾಡುತ್ತಲೇ) ಏನಪ್ಪಾ, ಈಗಂತೂ ಸರ್ವಮ್ಮನೋರ ಕಡಿಂದಾ ತಂದ ಹಣ ಎಷ್ಟಾತು ಅಂದೆ?

ಚನ್ನ—....ನಗ್ಡೆಷ್ಟು ಮಾವಾ? ಒಂದ್ನಲವತ್ತು – ಒಂದು ಹತ್ತು, ಆಮೇಲೆ ಮೊನ್ನೆ ಒಂದಿಪ್ಪತ್ತು – ಮತ್ತಾರು .... ಒಟ್ಟಗೆ ಎಪ್ಪತ್ತಾರ್ರಾತು ನಮ್ಮ ಕೈಲಿ ಕೊಟ್ಟದ್ದು! ........ ವೈದ್ಯರಿಗೆ ಎಷ್ಟು ಕೊಟ್ಟಾರೋ ಹೇಳ್ಳೇ ಇಲ್ಲ. ಇನ್ನು ಊಟಕ್ಕೆ ತಂದ ಕಾಳು ಎರಡೂವರೆ ಪಲ್ಲೇನೋ ಬಾಕಿ ಇದೆ. ಅದ್ರ ಕ್ರಯ ಹೇಳ್ಳೇ ಇಲ್ಲಾ ........ ಮೊನ್ನೆ ನಾನು ಹೋಗಿ ಅವ್ವಾ, ಒಂದು ಲೆಕ್ಕಾ ಮಾಡೋಣ ಅಂತ ಅಂದ್ರೆ, ಇಂದು ಬ್ಯಾಡಾ, ಮುಂದ ಮಾಡ್ಕೊಳ್ಳೋಣ ಅಂತ ಅಂದುಬಿಟ್ರು.

ಸಂಕಪ್ಪ—ಹಾಂ–ಅಂತೂ ನೂರಕ್ಕೆ ಮಿಕ್ಕಿತೂ ಅನ್ನು. ಹ್ಯಾಂಗಪ್ಪಾ ತೀರಿಸೋದು ಈ ಸಾಲವನ್ನ? ಹೊಲಾ–ಹೊಲ್ದ ಸಾಲಾ ಹಾಂಗೇ ಇದೆ. ಮನೆ ಅಂತೂ ಹೋಗಿಯೇಬಿಟ್ಟಿತೂ. ಅವ್ವೋರ ಎದೆ ಹೆಣ್ಣೆದೆ–ಸುಮ್ಮನಿದ್ದಾರು, ಆದ್ರೆ ಇದೆಲ್ಲಾದ್ರೂ ಸಾವ್ಕಾರ್ರೀಗೆ ತಿಳೀತೂ ಅಂತ ಅಂದ್ರೆ

ನಮ್ಮ ಪರಿಣಾಮ ನೆಟ್ಟಗಾತು. (ಬೆವರು ಒರೆಸುತ್ತಾ) ಏನಪ್ಪಾ, ಅಲ್ನೀರು ತಂವಪ್ಪಂಟೀನು ?

ಚನ್ನ—(ಕೊಡಾ ನೋಡಿ) .... .... ಇಲ್ಲ ಮಾವಾ, ತೀರಿಹೋಗಿದೆ. ತರ್ತೀನೆ ನಿಲ್ಲು. (ಹೋಗುವನು)

ಸಂಕಪ್ಪ—(ಕೆಲಸ ಮಾಡುತ್ತಾ) ಏನಪ್ಪಾ ಇದೂ. ಕೊನೆಗೂ ನಾನು ಸಾಲ್ದಲ್ಲೇ ಸಾಯ್ಬೇಕೇ ? ದುಡ್ದೂ ದುಡ್ದೂ ಮುಪ್ಪಾಗಿ ಕುಂತ್ರೂ ಇನ್ನೂ ಸುಖಾ ಇಲ್ಲೇನು ನಮ್ಮದೃಷ್ಟದಾಗೆ ? ಇನ್ನ ಯಾವಾಗಪ್ಪಾ ಸುಖ ಉಣ್ಣೋದು? ಸಾಲಾ ತೀರ್ಸಿ, ಪಾಪಿಗಳಡ್ಯೊಂದು ಮದ್ವೇ ಶಾಸ್ತ್ರ ಮಾಡಿ ಕಣ್ಣು ಮುಚ್ಕವಾ ಅಂತ ಅಂದ್ರೆ ನನ್ನ ಹಣೇಲಿ ಏನ ಬರದದೆಯೋ ಯಾರೀಗ್ಗೊತ್ತು ? ಇನ್ನು ನಾನ್ದುಡೀತೇನೆಯೋ - ಇನ್ನ ನನ್ನ ಸಾಲ ತೀರತ್ತೆಯೋ ? ಇನ್ನ ನಾನೀ ಮಕ್ಳ ಮದ್ವೆ ನೋಡ್ತೇನೆಯೋ ? ಶಿವಶಿವಾ! ಏನ ಬರೆದಿದ್ದೀಯಪ್ಪಾ ನನ್ನ ಹಣೇಲೀ ? ಓ ಭೂಮಿತಾಯೀ! ಏನ ಮಾಡ್ತೀಯಮ್ಮಾ ನನ್ನ ಆಶೇನ ! ಆಶೆ ತೀರದೇ ಸತ್ತು ಕೊನೇಗೇನಾದ್ರೂ ಪಿಶಾಚ್ಯಾಂಗೆ ತಿರುಗೋಹಾಂಗೆ ಮಾಡ್ತೀಯೇನವ್ವಾ ? ಅವ್ವಾ, ಸತ್ಮೇಲಾದ್ರೂ ಆತ್ಮಕ್ಕೊಂದು ಶಾಂತಿ ಕೊಡ್ತೀಯಾ ? ಬೇಡ ತಾಯೀ - ನನ್ನನ್ನ ಆಶಾಪಿಶಾಚಿಯಾಗಲ್ಸಬೇಡಾ....ನಾನ್ದುಡೀತೇನೆ, ನಿನ್ನ ಸೇವೆ ಮಾಡ್ತೇನೆ, ನಿನ್ನ ಪೂಜಾ ಮಾಡ್ತೇನೆ, ಅಮ್ಮಾ ಹಾಂಗ್ಮಾಡ್ಬೇಡಮ್ಮಾ ! ದುಡ್ದೂ ದುಡ್ದೂ ನಿನ್ನ ಪಾದ್ದಮೇಲೆ ಈ ದೇಹ ಬಿದ್ರೂ ಚಿಂತಿಲ್ಲವ್ವಾ - ನನ್ನನ್ನ ಸಾಲ್ದಲ್ಲಿ ಮಾತ್ರ ಕೊಳ್ಸಬೇಡಾ, ಆಶೆಯಿಂದ ನರಳ್ಸಬೇಡ. ತಾಯೀ, ನಾನ್ದುಡೀತೇನೆ, ಇಗಾ-ಈ ದೇಹಾ ಹೋಗೋವರೆಗೂ ದುಡೀತೇನೆ. (ರಭಸದಿಂದ ಕಡಿಯುತ್ತ ಗೊಣಗುತ್ತಲಿರುವನು)

ಚನ್ನ—(ಪ್ರವೇಶಿಸಿ) ಇದೇನ್ಮಾವಾ ! ಹೀಂಗೆ ಹುಚ್ಚ್ಯಾಂಗ್ ಗೊಣಗತಾ ಇದ್ದೀರಲ್ಲಾ ? (ನೋಡಿ) ಅಂ-ಕರ್ಕೇ ಬೆಳ್ದದ್ದೆಲ್ಲಿ-ನೀವ್ಕಡಿಯೋದೆಲ್ಲಿ ! ಮಾವಾ....ಇದೇನಿದು ?

ಸಂಕಪ್ಪ—ಚನ್ನಾ--ಬಾರೋ ! ಯಾಕ್ ಸೋಮಾರಿಯಾಗಿ ನಿಂತಿದ್ದಿಯೋ ?

ದುಡೀ .... ತಾಯೀ ಸೇವೆ ಮಾಡು; ತಾಯನ್ನ ನಂಬಿದೋರ್‍ಯಾರೂ ಹಾಳಾಗಿಲ್ಲ-ಬಾ-ಬಾರೋ! (ಕಡಿಯುತ್ತಲೇ ಇರುವನು)

ಚನ್ನ—....ಮಾವಾ, ಗುದ್ದಲೀ ಸ್ವಲ್ಪ ಕೆಳಕ್ಕಿಡ್ರೀ, ಇಗೊಳ್ಳೀ, ನೀರ್ತಂದಿದೇನೆ, ಸ್ವಲ್ಪ ನೀರ್ಕುಡೀರಿ.

ಸಂಕಪ್ಪ—ಅದೆಂತಾ ನೀರೋ ನೀನು ತಂದದ್ದೂ ಚನ್ನಾ! ಹಳ್ಳದ ಹೊಂಡದ ಜೌಗು ನೀರು, ಆ ನೀರು ನನಗೆ ಬೇಡ....ಅದು ಹೊಲಸು ಕಾಣೋ. ಇಗಾ -- ನನ್ನ ಮೈಯಿಂದ ನೀರು, ಮಳೆಗಾಲದ ಹೊಳೆ ಹಾಂಗ್ ಹ್ಯಾಂಗ್ ಹರೀತೈತೆ ನೋಡು, ಈ ನೀರು ಬಲು ಸವಿ ಕಣೋ. ಈ ನೀರ್ ಕುಡ್ದೇ ಜಗತ್ತು ಬದಕ್ತಾ ಇದೆ, ಈ ನೀರ್ಕುಡ್ದೇ ಲೋಕ ಶಾಂತವಾಗೈತೆ. ಮತ್ತೆ ಈ ನೀರ್ಕುಡ್ದೇ ಸಾವ್ಕಾರಾ-ರೈತರನ್ನಾ, ಧನಿ-ಬಡವರನ್ನಾ, ರಾಜಾ-ಪ್ರಜರನ್ನಾ, ಕುಣ್ಸತಾನೇ ಕಣೋ, ಬಾ-ನೀನೂ ಬಾ, ಕುಡೀ ಇದೇ ನೀರನ್ನ.

ಚನ್ನ—....ಮಾವಾ! ಆಗಲಿ ಮಾವಾ! ನೀವು ದಯವಿಟ್ಟು ಸ್ವಲ್ಪ ವಿಶ್ರಾಂತಿ ತಗೊಳ್ಳೀ--ನೀವು ಇದೇ ಇನ್ನೂ ಕಾಯ್ಲೇ ಬಿದ್ದು ಎದ್ದವರೂ ........ದೇಹದಲ್ಲಿ ಶಕ್ತಿಯಿಲ್ಲಾ -- ಮುಪ್ಪಿನ ದೇಹಾ; ಶ್ರಮಪಟ್ಟುಕೋ ಬ್ಯಾಡ್ರಿ.

ಸಂಕಪ್ಪ—ಯಾರ್ಹತ್ರ ಹೇಳ್ತೀಯೋ ಚನ್ನಾ - ನನ್ನ ದೇಹಾ ಮುಪ್ಪಿಂದಂತ? ಯಾರ್ಗೆ ಹೇಳ್ತೀಯೋ ಚನ್ನಾ -- ನನ್ನ ಶಕ್ತಿ ಕುಂದೈತೇ ಅಂತ! ಹೇಳ್ತೇನೆ ಕೇಳು--ರೈತ-ಬಡವಾ ಹ್ಯಾಂಗಿದ್ರೂ ದುಡೀಲೇಬೇಕ್ ಕಣೊ. ಅವರಿಗೆ ಶ್ರಮ ಎಲ್ಲೀದೋ? ಅವರಿಗೆ ವಿಶ್ರಾಂತೀಗೆ ಕಾಲ ಎಲ್ಲೀದೊ? ಅಳೋಕೂ ಸುಖದಿಂದ್ಸಾಯೋಕೂ ರೈತಗೆ ಸಮ್ಯಾ ಇಲ್ಲ ಕಾಣೋ. ಸೂರ್ಯ ಒಂದು ದಿನ ಹುಟ್ಟದೆ ನಿಂತಾನ! ಚಂದ್ರಾ ಒಂದಿನಾ ಬೆಳಗದೇ ಇದ್ದಾನ .... ಆದ್ರೆ ಒಕ್ಕಲಿಗ ಮಾತ್ರ ಹಾಂಗೇ ಇರಬಾರ್ದು ಕಾಣೋ. ಅವನ್ಹುಟ್ಟಿದ್ದೇ ದುಡಿಯೋಕೆ ಕಣೋ. ಬಾ, ಇಬ್ರೂ ಸೇರಿಯೇ ದುಡಿಯೋಣ.

ಚನ್ನ—(ಹಿಂದಿನಿಂದ ಹೋಗಿ ಗುದ್ದಲಿಯನ್ನು ಕಿತ್ತು) .... ಮಾವಾ........ಆದ್ರೂ ಚಿಂತೆಯಿಲ್ಲ, ಬಿಸ್ಲ ತಾಪ ಜಾಸ್ತಿ ಅದ....ನೀವ್ಸೊಲ್ಪ ಆ ಮರದ ನೆರಳಲ್ಲಿ ಕುಂತಕೊಳ್ಳಿ.

ಸಂಕಪ್ಪ—(ನಾಲ್ಕು ಹೆಜ್ಜೆ ನಡೆದು) ಇದೇನು ಬಿಸ್ಲ ತಾಪ್ವೋ ಚನ್ನಾ! ಈ ನನ್ನ ಹೊಟ್ಟೇ ಬೆಂಕಿಯನ್ನ, ಆ ನನ್ನ ಸಾಲ್ದ ತಾಪವನ್ನ ಇದೇನಾ್ರ ಡುತ್ತೋ! ಚನ್ನಾ, ನಾನೂ ವಿಶ್ರಾಂತಿ ತಕ್ಕೋತೇನೆ, ಅನಂತರಾ ವಿಶ್ರಾಂತಿ ತೆಕ್ಕೊಳ್ಳತೇನೆ. ಮಹಾವೃಕ್ಷದ ನೆರಳಲ್ಲೇ ವರಗುತ್ತೇನೆ.... ಕೊಡು....ಆ ನನ್ನ ಗುದ್ದಲಿಯನ್ನ ಕೊಡು. ಮೊದಲು ಆ ನನ್ನ ಒಡ್ತೀ ಸಾಲಾ ತೀರ್ಸಿ, ಸಾಹುಕಾರ್ನ ಋಣದಿಂದ ಮುಕ್ತಾ ಆಗಿ! ಚನ್ನಾ, (ನಕ್ಕು) ಅಪ್ಪಾ! (ಅಳುತ್ತ) ನಿಮ್ಮಿಬ್ಬರ ಸುಖದ ಸಂಸಾರಾನ ಕಣ್ತುಂಬಾ ಕಂಡು ನಾನು ವಿಶ್ರಾಂತೀನೇ ತಕ್ಕೊಳ್ತೇನಪ್ಪಾ. ನನಗೆ ಈ ಮರದ ನೆರಳು ಸಾಲ್ದು....ಸಾಲ್ದೋ ಚನ್ನಾ! ಆದ್ರಿಂದ ಕೊಡಾ ಗುದ್ದಲಿ. (ಬೀಳುವನು.)

[ಗಿರಿಯಪ್ಪ, ಸರ್ವಮಂಗಳೆ ಮತ್ತು ಗಂಗವ್ವ ಓಡುತ್ತ ಬರುವರು]

ಗಿರಿಯಪ್ಪ—ಚನ್ನಾ, ಏನದು?

ಗಂಗವ್ವ—ಅಪ್ಪಾ! ಏನಾಯ್ತು? ನಿನ್ನದೇನವಸ್ಥೆಯಿದು?

ಸರ್ವಮಂಗಳೆ—ಅಜ್ಜಾ! ಹೀಂಗ್ಯಾಕ್ ಮಾಡ್ತಿ ಅಜ್ಜಾ! ಏನಾಗತ್ತೆ ನಿನ್ಗೆ?

ಸಂಕಪ್ಪ—(ಚೇತರಿಸಿಕೊಳ್ಳುತ್ತಾ ಮೇಲಕ್ಕೆದ್ದು) ಅವ್ವಾ! ಗಿರಿಯಣ್ಣಾ! ಮತ್ಬಂದ್ರಾ? ಚನ್ನಾ! ಚನ್ನಾ! ನಾನು ಸಾವ್ಕಾರ್ನ ಋಣದಲ್ಸಾಯ ತ್ತೇನೆ....ತಪ್ಸು ನನ್ನನ್ನ ಈ ಮಹಾಬಂಧನದಿಂದ! ನಾನಾತ್ನ ಋಣ ವನ್ನಷ್ಟ ತೀರ್ಸಿ ಪ್ರಾಣಾ ಬಿಡ್ತೇನೆ, ಕೊಡು....ಕೊಡಪ್ಪಾ ಆ ನನ್ನ ಗುದ್ದಲಿ. ಅಗಾ! ಅಗಾ – ಆ ಋಣರಾಕ್ಷಸ! ಸಾಲದ ಭೂತ ನನ್ನನ್ನ ಹಿಡ್ದು ತಿನ್ನೋಕೆ ಬರ್ತಾ ಇದೆ. ನೋಡು–ಅಲ್ಲಿ ನೋಡದ್ರ ವಿಕಾರ ರೂಪಾ! ಅಗಾ! ಸಂಪತ್ತಿನ ಸುರೇ ಕುಡ್ದು ಕೆಂಪಾದ ಕಣ್ಣು, ಸಾಲೀಗ್ರ ರಕ್ತಾ ಕುಡ್ದೂ ಕುಡ್ದೂ ಉಬ್ಬಿದ ಆ ದೇಹಾ,

ಹಣದ ಹೇಣೀನ ಗೂಳಿ ಕಡ್ದು ಕಡ್ದು ಮೊಂಡಾದ ಆ ದವಡೆಯ ಹಲ್ಲು ಏನ ವಿಕಾರ ತೋರತ್ತೇ ನೋಡು ! ಅಗಾ, ಬಂತು, ಬಾಯ್ತೆರ ಕೊಂಡು ನನ್ನ ಕಡೆಗೆ ಬಂತು ! ಅಯ್ಯೋ ! ನನ್ನ ಹಿಡ್ಯೋಕೆ ಕೈ ಚಾಚತಾ ಇದೆ....ಅಯ್ಯಯ್ಯೋ‌ನಾನು ಸತ್ತೆ ! (ಬೀಳುವನು)

ಸರ್ವಮಂಗಳೆ—ಸಂಕಜ್ಜಾ ! ಸಂಕಜ್ಜಾ ! ಗಂಗವ್ವಾ ! ಓಡು, ಸ್ವಲ್ಪ ನೀರನ್ನ ತಾ. (ಗಂಗವ್ವ ನೀರು ತರುವಳು) ಅಜ್ಜಾ ! ಇದೋ ನೀರು, ಸ್ವಲ್ಪ ನೀರನ್ನು ಕುಡಿಯಜ್ಜಾ ! (ಬಾಯಿಗೆ ನೀರು ಬಿಡುವಳು)

ಸಂಕಪ್ಪ—ತಾಯೀ, ಈ ಅಪವಿತ್ರ ಸಾಲಿಗನನ್ನು ಮುಟ್ಬೇಡ್ರಿ ನೀವು ! ಗಿರಿಯಣ್ಣಾ ! ನಾನಲ್ಲವಾದ್ರೂ ಈ ಚನ್ನ-ಗಂಗಿಯರು ನಿಮ್ಮ ಸಾಲ ವನ್ನ ತೀರ್ಸ್ತಾರೆ, ಕ್ಷಮಿಸಿ !

ಗಿರಿಯಪ್ಪ—ಸಂಕಣ್ಣಾ ! ನಿನ್ನ ಸಾಲ ಬಡ್ಡೀ ಸಮೇತ ಎಂದೋ ವಸೂಲಾಗಿ ಬಿಟ್ಟಿದೆ. ಅನಾವಶ್ಯಕ ನಿನ್ನನ್ನ ನಾನು ಪೀಡಿಸಿದೆ. ನೀನು ನಿಶ್ಚಿಂತೆ ಯಿಂದಿರು. ನೀನು ಸಾಲಿಗನಲ್ಲ, ಋಣಮುಕ್ತನಾಗಿರುವೆ.

ಸಂಕಪ್ಪ—ಹಾಗಾದ್ರೆ ನಾನು ಸಂತೋಷದಿಂದ ಸಾಯ್ತೇನೆ. ತಾಯೀ ! ಈ ನನ್ನ ಮಗ್ಳ ಮದ್ವೇ ಒಂದು ನೋಡ್ಬೇಕಂತ ಆಶೆಯಿತ್ತು ನನಗೆ....ಅದ ನ್ನೊಂದು ನಡ್ಸತೀರಾ ? (ಸರ್ವಮಂಗಳೆಯೂ ಗಿರಿಯಪ್ಪನೂ ಒಬ್ಬರ ಮುಖವನ್ನೊಬ್ಬರು ನೋಡುವರು.)

ಗಿರಿಯಪ್ಪ—ಸಂಕಣ್ಣಾ ! ಈ ನಿನ್ನ ಸರ್ವ ಸಂಕಟಕ್ಕೂ ಕಾರಣ ನಾನು. ನೋಡು, ಈ ನನ್ನ, ನಿನ್ನ, ಜಗತ್ತಿನ ಸರ್ವರ ಹೊಟ್ಟೇಗೂ ಕೊಡತಕ್ಕ ಈ ಭೂಮಾತೆಯ ಪ್ರಮಾಣ ಮಾಡಿ ಹೇಳ್ತೇನೆ, ಇಂದಿನಿಂದ ಈ ಗಂಗವ್ವನು ನಿನ್ನ ಮಗಳಲ್ಲ, ನನ್ನ ಮಗಳು. ನಿನ್ನ ಇಚ್ಛೆಯಂತೆ ಇದೇ ಈ ಪವಿತ್ರ ಸ್ಥಳದಲ್ಲಿ ಈ ಚನ್ನ-ಗಂಗೆಯರ ಲಗ್ನಮಾಡಿಸಿ ನಿನ್ನ ಆತ್ಮಕ್ಕೆ ಸಂತೋಷವನ್ನುಂಟುಮಾಡ್ತೇನೆ.

ಸಂಕಪ್ಪ—ಸಂತೋಷ ... ನಿ - ೯ - ರು....(ಸಾಯುವನು. ಎಲ್ಲರೂ ಶೋಕಿಸುವರು)

ಗಿರಿಯಪ್ಪ—ಚನ್ನಪ್ಪಾ! ನನ್ನ ಕೃತಕರ್ಮದ ಬಗ್ಗೆ ನನಗೆ ನಿಜವಾಗಿಯೂ ಪಶ್ಚಾತ್ತಾಪವಾಗ್ತಾ ಇದೆ. ನನ್ನಂತೆಯೇ ಜಗತ್ತಿನಲ್ಲಿ ಎಷ್ಟು ಮಂದಿ ಧನಿಕರು, ಬಡ ರೈತರ ಕತ್ತನ್ನು ಹಿಸುಕಿ ಕೊಲ್ಲುತ್ತಿರುವರೋ! ಇನ್ನು ಮಾತ್ರ ನಾನೀ ಅಧಮ ರೀತಿಯಲ್ಲಿ ಜೀವನವನ್ನು ನಡೆಸಲಾರೆ. ರೈತರೂ ನಮ್ಮಂತೆಯೇ ಮಾನವರು, ಅವರಿಗೂ ನಮ್ಮಂತೆಯೇ ಜೀವವಿದೆ, ಸುಖಿಸಬೇಕೆಂಬ ಆಶೆಯಿದೆ, ಹೃದಯವಿದೆ, ಪ್ರೇಮವಿದೆ. ಆದರೆ ನಾವು ಮಾತ್ರ ಸ್ವಾರ್ಥಾಭಿಲಾಷೆಯಿಂದ ಅವರ ಸರ್ವಸ್ವವನ್ನೂ ಕಿತ್ತು ನಮ್ಮ ಬೊಕ್ಕಸವನ್ನು ತುಂಬಿಕೊಳ್ಳುತ್ತಲಿದ್ದೇವೆ. ಅವರ ಶಾಪ, ಅವರ ಒಡ ಲುರಿ ಜನ್ಮಜನ್ಮಕ್ಕೂ ತಪ್ಪಿದ್ದಲ್ಲವೆಂಬ ಭಾವನೆಯು ನನ್ನಲ್ಲೀಗ ಒಡ ಮೂಡಿದೆ ಆದ್ದರಿಂದ ನನ್ನ ಮುಂದಿನ ಜನ್ಮವನ್ನು ನಿಮ್ಮ ಸೇವೆ ಯಲ್ಲೇ ಕಳೆದು, ಅದರ ಸಾರ್ಥಕಪಡಿಸಿಕೊಳ್ಳಬೇಕೆಂದಿದ್ದೇನೆ.

ಚನ್ನ—ತಮ್ಮ ಸಂತೋಷ ಸಾಹುಕಾರ್ರೇ ....

ಗಿರಿಯಪ್ಪ—ಚನ್ನಪ್ಪಾ! ವಿವಾಹವೆಂಬುದೊಂದು ಮಂಗಲಕಾರ್ಯ. ನನ್ನಿಂ ದಾದ ಈ ಕರ್ಮಯೋಗಿಯ ಕೊಲೆಯ ದುಃಖವು ನಿಮ್ಮ ಹೃದಯ ದಿಂದ ಅಳಿಸುವುದಕ್ಕೆ ಮುಂಚೆಯೇ ನಾನೀ ಮಂಗಳಕಾರ್ಯಕ್ಕೆ ಕೈ ಇಕ್ಕಲಾರೆ. ಅಲ್ಲದೆ ಮಳೆಗಾಲವಾದರೂ ಆಗಲೇ ಬರುವ ಚಿಹ್ನೆಯು ತೋರುತ್ತಲಿದೆ. ಆದ್ದರಿಂದ ಮುಂದಿನ ಮಾಘಮಾಸದಲ್ಲೇ ನಾನಿದನ್ನು ನನ್ನ ಸ್ವಹಸ್ತದಿಂದ ನೆರವೇರಿಸುತ್ತೇನೆ.

ಸರ್ವಮಂಗಳೆ—ಈ ನಡುವೆ ಆಗತಕ್ಕ ಕಾರ್ಯವೂ ಒಂದು ಮಹತ್ವದ್ದಿದೆ. ಈ ಮಹಾಪುರುಷನ ಸ್ಮಾರಕವಾಗಿ ತಾವಿದೇ ಸ್ಥಳದಲ್ಲೊಂದು ಸುಂದರ ಸಮಾಧಿಯನ್ನು ಕಟ್ಟಿಸಬೇಕು. ಆ ಸಮಾಧಿಯ ಶಿಖರದ ಮೇಲೆ ಈ ಕರ್ಮಯೋಗಿಯ ವಿಜಯಧ್ವಜವು ಹಾರಾಡುತ್ತಲಿರಬೇಕು. ಅದು ಎಂದೆಂದೂ ನಮ್ಮ ಹಳ್ಳಿಯ ಬಡರೈತರ ಸೇವೆಯ ಹಿರಿಮೆಯನ್ನು ಜಗತ್ತಿಗೆಲ್ಲಾ ಸಾರುತ್ತಲಿರುವುದು. ಅಲ್ಲದೇ ಅದು ಬೊಕ್ಕಸವನ್ನು ತುಂಬಿಕೊಂಡು ತಮ್ಮ ಸುಖಭೋಗದಲ್ಲಿ ರೈತರನ್ನು ಮರೆಯುವ,

ಶ್ರೀಮಂತರ, ಸಾಹುಕಾರರ, ರಾಜಮಹಾರಾಜರ ಕಣ್ಣನ್ನು ತೆರೆದು ಹೃದಯವನ್ನು ವಿಕಾಸಗೊಳಿಸುವ ಮಹಾಕಾವ್ಯವನ್ನೂ ಮಾಡುವುದು.

ಗಿರಿಯಪ್ಪ—ನಿನ್ನ ಸಂತೋಷ. ನಾಳೆಯಿಂದಲೇ ಆ ಕೆಲಸಕ್ಕೆ ತೊಡಗುವ. ಈಗ ಮೊದಲು ಈ ಮೃತಶರೀರದ ಮುಂದಿನ ಕ್ರಿಯೆಗೆ ವ್ಯವಸ್ಥೆ ಮಾಡುವ.

[ ತೆರೆ ಬೀಳುವುದು ]

## ನೋಟ ೯

[ ಊರಿನ ರಸ್ತೆ. ವಾದ್ಯವು ಮೊಳಗುವುದು. ಮದುವೆಯ ಹೇಳಿಕೆಯನ್ನು ಮಾಡುತ್ತಾ ಸಿದ್ದಣ್ಣ, ಲಿಂಗಪ್ಪ, ಸರ್ವಮಂಗಳೆಯರು ಹೊರಟಿರುವರು. ರಾಮಯ್ಯನೂ ಪ್ರವೇಶಿಸುವನು.]

ಸಿದ್ದಪ್ಪ—ಏನು ಗೌಡ್ರ ! ನಿಮ್ಮ ಮನೇಗೆ ಹೋಗಿದ್ವು; ನೀವಿರಲಿಲ್ಲ. ಆಮೇಲೆ ತನಗೆ ಹೇಳಿಕೆಯಾಗಿಲ್ಲಾ ಅಂತ ಅನ್ನಬೇಡ್ರಿ, ನಾಳೆ ಗೋಧೂಳಿ ಲಗ್ನದಲ್ಲಿ ನಮ್ಮ ಗಂಗವ್ವ-ಚನ್ನಪ್ಪರ ಲಗ್ನ. ಬಂದು ಆಶೀರ್ವಾದ ಮಾಡಿ ನಾಲ್ಕು ಅಕ್ಷತೇ ಕಾಳು ಹಾಕಿ ಬಂದುಬಿಡ್ರಿ.

ರಾಮಯ್ಯ—ವ್ಹಾ ! ಸಿದ್ದಣ್ಣಾ, ಇದೊಳ್ಳೆಯ ಹಾಸ್ಯ. ನನ್ನ ತಂಗಿಯ ಮದುವೆಗೆ ನನಗೇ ಹೇಳತೀಯೇನೋ ?

ಸಿದ್ದಪ್ಪ—ಹಾಂಗಲ್ಲಾ ಸಂಣ ಗೌಡ್ರಾ ! ದಾರಿಯಲ್ಲೇ ಸಿಕ್ಕಿದ್ದುಕ್ಕೊಂದು ಹೇಳಿದೆ ಅಷ್ಟೆ, ಇರಲೀ, ಮದುವೇ ಮಂಟಪಾ, ಚಪ್ಪರಾ ಎಲ್ಲಾ ಸಿದ್ಧವಾಯ್ತೇನು ?

ರಾಮಯ್ಯ—ಅದೆಲ್ಲಾ ನನ್ನ ಜವಾಬ್ದಾರಿ, ಎಲ್ಲಾ ಸೊಗಸಾಗಿ ನಡೀತಾ ಇದೆ. ಇವರ ಮೇಲೆ ಸಾವುಕಾರ್ರು ಟೊಂಕ ಕಟ್ಟಿ ನಿಂತು ಕೆಲಸ ಮಾಡ್ತಾಯಿದ್ದಾರೆ.

ಸಿದ್ದಪ್ಪ—ನಾನೊಂದು ವಿಶೇಷ ವರ್ತಮಾನ ಕೇಳ್ದೆ, ನಿಜವೇನು ?

ರಾಮಯ್ಯ—ಅದೇನಣ್ಣಾ ಅಂಥಾ ವಿಶೇಷ ?

ಸಿದ್ದಪ್ಪ—ನಾಳೇನೇ ಸಾವುಕಾರ್ರು ತಮ್ಮ ಸ್ವಹಸ್ತದಿಂದಲೇ ಕಟ್ಟಿಸಿಕೊಡತಕ್ಕ ರೈತರ ಸೇವಾಶ್ರಮದ ಶಂಖುಸ್ಥಾಪನೆಯನ್ನು ಮಾಡ್ತಾರಂತಲ್ಲಾ ?

ರಾಮಯ್ಯ—ಹೌದು ಸಿದ್ದಣ್ಣಾ ! ಸಾವುಕಾರ್ರು ಅದಕ್ಕೆ ಹತ್ತು ಸಹಸ್ರ ರೂಪಾಯಿ ಕೊಡುವುದಾಗಿ ವಚನವಿತ್ತಿದ್ದಾರೆ. ಅದರ ಕೆಲ್ಸ ಬೆಳಿಗ್ಯೆ, ಲಗ್ನ ಸಾಯಂಕಾಲ.

ಸಿದ್ದಪ್ಪ—ಆಗಲಿ, ಅಂತೂ ನಾಳೆ ಒಂದು ಶುಭದಿನ. ತಮ್ಮ ಕನಸಿನ ಆಶೆಯೆಲ್ಲಾ ಈಗ ಈಡೇರ್‍ತಾ ಇದ್ದಾವೆ. ಬರ್‍ತೀನೆ ನಮಸ್ಕಾರ.

ರಾಮಯ್ಯ—ತಮ್ಮೆಲ್ಲರ ಪ್ರೇಮ. (ಹೋಗುವನು)

ಲಿಂಗಪ್ಪ—ಸಿದ್ದಣ್ಣಾ ! ಆಚೆ ಕೇರಿ ಒಂದು ಬಿಟ್ಟೇಬಿಟ್ಟೆಯಲ್ಲೋ, ಇಲ್ಲೇ ಹಿಂದಿನ ಮನೆಯೂ ಒಂದು ಉಳೀತು, ಹೇಳಿ ಬಂದುಬಿಡು. (ಸಿದ್ದಣ್ಣನು ತೆರೆಯೊಳಕ್ಕೆ ಹೋಗಿಬರುವನು; ದಿಬ್ಬಣ ಮುಂದಕ್ಕೆ ಸಾಗುವುದು.)

[ ತೆರೆ ಏರುವುದು ]

## ನೋಟ ೧೦

[ ಸಮಾಧಿಯ ಮುಂದೆ ಎಲ್ಲರೂ ನಿಂತಿರುವರು. ಕರ್ಮಯೋಗಿ ಎಂಬ ಧ್ವಜವು ಹಾರಾಡುತ್ತಿರುವುದು.]

ಗಿರಿಯಪ್ಪ—ಸಮಾಧಿಸ್ಥ ಸಂಕಜ್ಜಾ ! ನಿನ್ನ ಮರಣೋತ್ಕ್ರಮಣ ಕಾಲದಲ್ಲಿ ನಾನು ನಿನಗೆ ಕೊಟ್ಟ ವಚನದಂತೆ, ನಿನ್ನೀ ಚನ್ನಪ್ಪ-ಗಂಗೆಯರ

ವಿವಾಹವನ್ನು ಯಥೋಚಿತವಾಗಿ ನೆರವೇರಿಸಿರುವೆನು ; ಪತಿ-ಪತ್ನಿಯರನ್ನು ಆಶೀರ್ವದಿಸು.

[ವಧೂವರರು ಸಹೂಧಿಯ ಮುಂದೆ ತಲೆಬಾಗುವರು. ಎಲ್ಲರೂ ನಮಸ್ಕರಿಸುವರು.]

ರಾಮಯ್ಯ—ಈ ಸಂತೋಷ ಸಮಯದಲ್ಲಿ ಎಲ್ಲರೂ ಈ ಕರ್ಮಯೋಗಿಯ ಉಪಾಸ್ಯದೇವತೆಯಾದ ಭಾರತಮಾತೆಯನ್ನು ಪ್ರಾರ್ಥಿಸೋಣ.

## ಮಂಗಲಂ

ರಾಗ_ಲಲತ್_ತ್ರಿತಾಲ

ಶರಣು ಶರಣು ಮಮ ಭಾರತೀ |
ಪರಮ ಕರುಣೆ ವರಧರ್ಮರೂಪಿಣಿ |
ಶೀಲ ಕ್ಷಮಾಗುಣ ಸತ್ಯರೂಪಿಣಿ || ಧೃ||
ಅತುಲಖ್ಯಾತೆ ಶುಭೆ ಸಂಪದೆ ಶಾಂತೆ |
ಕೀರ್ತಿಕಲಾನ್ವಿತೆ ಪೂಜಿತೆ ಮಾತೆ |
ನೀತಿ ಸತ್ಯ ಧರ್ಮವ ನೆಲೆ ನಿಲಿಸಿ |
ಪಾಲಿಸು ಲೋಕವ ಜಯ ಜಗನ್ಮಾತೆ ||

**ಭಾರತಮಾತೆಗೆ ಜಯವಾಗಲಿ !**

**ಕನ್ನಡತಾಯಿಗೆ ಜಯವಾಗಲಿ !!**



# ಆಶ್ರಮದ ಪ್ರಕಟನೆಗಳ ಬಗ್ಗೆ

**ದೇವರು ಯಾರು?**:— ಈ ಗ್ರಂಥದಲ್ಲಿ ದೇವರು ಯಾರು? ಎಂಬೀ ವಿಚಾರವನ್ನು ಗ್ರಂಥಕರ್ತರು ಪಾಶ್ಚಾತ್ಯ ವಿಜ್ಞಾನಿಗಳ ಮತ್ತು ನಮ್ಮ ಪ್ರಾಚೀನ ದಾರ್ಶನಿಕರ ದೃಷ್ಟಿಗಳೆರಡ ರಿಂದಲೂ ಚೆನ್ನಾಗಿ ವಿಮರ್ಶಿಸಿದ್ದಾರೆ—ಗ್ರಂಥವು ವಾಚನೀಯವೂ, ವಿಮರ್ಶನೀಯವೂ ಆಗಿದೆ.

— ಸುಬೋಧ, ಮಾರ್ಚಿ, 1950.

ವಿಜ್ಞಾನವನ್ನು ವಿಪರೀತವಾಗಿ ಬಲ್ಲೆವೆಂದು ತಿಳಿದುಕೊಂಡವರು ದೇವರನ್ನು ಹೀಯಾಳಿಸುವುದುಂಟು. ದೇವರಲ್ಲಿ ವಿಪರೀತ ನಂಬಿಕೆ ಇರುವುದಾಗಿ ತಿಳಿದುಕೊಂಡವರು ವಿಜ್ಞಾನವನ್ನು ಹೀಯಾಳಿಸುವುದುಂಟು. ಆದರೆ ಇವೆರಡು ವಾದಗಳನ್ನು ಒಟ್ಟುಗೂಡಿಸಿ ಪತ್ತಿರಕೆ ತರಲು ಶ್ರೀ ಮೂರ್ತಿಯವರು ಈ ಆಸಕ್ತಿಕರವಾದ ಪುಸ್ತಕದಲ್ಲಿ ಪ್ರಯತ್ನಿಸಿದ್ದಾರೆ.

— ತಾಯಿನಾಡು, 22-4-1950.

ಶ್ರೀ ಮೂರ್ತಿಗಳ ಈ ವಿದ್ವತ್ಪೂರ್ಣವಾದ ಜಿಜ್ಞಾಸೆ ವಿಚಾರಶೀಲರೆಲ್ಲರಿಗೂ ಸಂತೋಷ ಉಂಟುಮಾಡುವುದು ಖಂಡಿತ. ಅಂತೆಯೇ ಇದೊಂದು ಹಿರಿದಾಯ ಗ್ರಂಥ.

— ದೇಶಬಂಧು, 13-4-50.

ಅನುಭವಗಮ್ಯವಾದ ನವೀನತರದ ಇವರ ಬರಹದ ಸೊಗಸು ಬೆರಗುಗೊಳಿಸುತ್ತದೆ.

— ಸುಖಾಶ್ರಯ ಪ್ರಬೋಧ, ವಿಕ್ರಮ ಸಂ. ಆಷಾಢ.

**ಚೆಂಗೂಲಿ ಚಲುವ** :—ನಾ. ಕಸ್ತೂರಿಯವರು ಹುಟ್ಟು ಕತೆಗಾರರು. ಕಾದಂಬರಿಯನ್ನು ಕೊನೆಯವರೆಗೂ ಓದಿ ಮುಗಿಸುವವರೆಗೂ ನಮ್ಮ ಮನಸ್ಸು ಕಾದಂಬರಿಯ ಪ್ರಪಂಚದಲ್ಲಿಯೇ ಸುಳಿದಾಡುತ್ತಿರುತ್ತದೆ. "ಚೆಂಗೂಲಿ ಚಲುವ" ಒಮ್ಮೆ ಓದಿ, ಗ್ರಾಮ್ಯಭಾಷೆಯ ಸೌಂದರ್ಯವನ್ನು ಮನದಣಿಯ ಉಂಡು, ಕಸ್ತೂರಿಯವರ ಹಾಸ್ಯದಲ್ಲಿ ನಕ್ಕುನಲಿಯಬೇಕಾದಂತಹ ಒಂದು ಉತ್ತಮ ಕಾದಂಬರಿ.

— ಜನಪ್ರಗತಿ, 27-9-53.

ತಮ್ಮ ತಿಳಿಯಾದ ಹಾಸ್ಯದಿಂದ ಕನ್ನಡ ಸಾಹಿತ್ಯಕ್ಕೆ ನಗುವನ್ನು ಕಲಿಸಿದ ಶ್ರೀ ನಾ. ಕಸ್ತೂರಿಯವರು "ಚೆಂಗೂಲಿ ಚಲುವ" ನ ಆತ್ಮಕತೆಗೆ ಲಿಪಿಕಾರರಾಗಿದ್ದಾರೆ. ಶ್ರೀ ನಾ. ಕಸ್ತೂರಿಯವರು ದಿನಗೂಲಿ ಚಲುವನ ಬಾಳನ್ನು ತಮ್ಮ ಈ ಕಾದಂಬರಿಯಲ್ಲಿ

ಯಥಾವತ್ತಾಗಿ, ಹೃದಯಂಗಮವಾಗಿ ಚಿತ್ರಿಸಿ ಕನ್ನಡ ಸಾಹಿತ್ಯಕ್ಕೆ ಹೊಸ ಮಾದರಿಯ ಕಾಣಿಕೆ ಸಲ್ಲಿಸಿದ್ದಾರೆ.

ಗ್ರಂಥಕರ್ತರು ಶ್ರೀ ನಾ. ಕಸ್ತೂರಿ ಅವರೆಂದರೆ ಇನ್ನು ಅದರ ರಚನೆ, ಶೈಲಿ, ಧೋರಣೆ, ವಿಷಯನಿರೂಪಣಾ ವೈಖರಿ, ಕಥಾಸ್ವಾರಸ್ಯ ಇವುಗಳನ್ನು ಕುರಿತು ಪ್ರತ್ಯೇಕ ಹೇಳಬೇಕಾಗಿಲ್ಲ.

— ಸುಬೋಧ, ಏಪ್ರಿಲ್, 1953.

**ಕರ್ಮಯೋಗಿ** :—ಲೇಖಕರು, ಗ್ರಾಮವಾಸಿಯಾದ ಒಬ್ಬ ರೈತನ ಜೀವನವು ನಿಸ್ವಾರ್ಥವಾಗಿ, ನಿರಾಡಂಬರವಾಗಿ, ಆಲಸಿಕೆ ಇಲ್ಲದೆ ನಡೆದರೆ ಅದರಿಂದ ಅವನ ಮನೆತನಕ್ಕೂ, ಗ್ರಾಮಕ್ಕೂ, ದೇಶಕ್ಕೂ ಎಂತಹ ಮೇಲ್ಮೆ ಉಂಟಾಗಬಹುದೆಂದು ವ್ಯಕ್ತಪಡಿಸಲು ಈ ನಾಟಕವನ್ನು ಬರೆದಿರುವಂತೆ ತೋರುತ್ತದೆ.

— ಸುಬೋಧ, ಏಪ್ರಿಲ್, 1948.

ಹಳ್ಳಿಯ ರೈತಜೀವನದ ಚಿತ್ರವನ್ನು ಈ ನಾಟಕದಲ್ಲಿ ಚಿತ್ರಿಸಲಾಗಿದೆ.

— ಸ್ವದೇಶಾಭಿಮಾನಿ, 16-4-1948.

ಪ್ರಾದೇಶಿಕವಾದ ಗ್ರಾಮಭಾಷೆಯಲ್ಲಿ ರಚಿತವಾದ ಈ ನಾಟಕವು ಬೋಧಪ್ರದವಾಗಿಯೂ, ರಂಗಭೂಮಿಗೆ ಅರ್ಹವಾಗಿಯೂ ಇದೆ.

— ಪ್ರಜಾಮತ, 30-5-48.

**ಉದ್ಧಾರ** :—ಇದೊಂದು ಉತ್ತಮ ಸಾಮಾಜಿಕ ನಾಟಕ. ಅಷ್ಟೇ ಅಲ್ಲ, ಸಮಾಜವನ್ನು ತಿದ್ದಲು ಬಯಸಿ ಬರೆದ ನಾಟಕ.

— ತಾಯಿನಾಡು, 9-4-1949.

ಈ ನಾಟಕದಿಂದ ಕನ್ಯಾಶುಲ್ಕ, ವರದಕ್ಷಿಣೆ, ಕನ್ಯಾವಿಕ್ರಯ, ಬಾಲ್ಯವಿವಾಹ ಇವೆಲ್ಲ ಕಾರಣಗಳಿಂದ ಸಮಾಜದಲ್ಲಿ ಯಾವ ರೀತಿ ಅನ್ಯಾಯ, ಅನರ್ಥಗಳು ಪ್ರತಿಕ್ಷಣಕ್ಕೂ ನಡೆಯುತ್ತಿವೆ ಎಂಬುವನ್ನು ತಿಳಿಯಬಹುದು.

— ಪ್ರಜಾಮತ, 24-4-1949.

ವೃದ್ಧವಿವಾಹ, ವಿಧವೆಯರ ಒತ್ತಾಯದ ಬ್ರಹ್ಮಚರ್ಯ ಮೊದಲಾದ ಸಾಮಾಜಿಕ ದುರಾಚಾರಗಳನ್ನು ಹೋಗಲಾಡಿಸುವ ಉದ್ದೇಶದಿಂದ ಬರೆದ ಹಳೇ ಮಾದರಿಯ ಸಂಗೀತನಾಟಕ.

— ಕರ್ಮವೀರ, 15-4-1949.

ಕಥೆ ಸ್ವಾರಸ್ಯವಾಗಿದೆ. ಪಾತ್ರರಚನೆ ಜೀವಂತವಿದೆ. ಹಾಡುಗಳು ಲಲಿತವಾಗಿ ಮನೋಹರವಿರುತ್ತದೆ. ನಾಟಕವು ಓದುವುದಕ್ಕೂ, ರಂಗಭೂಮಿಯಲ್ಲಿ ಆಡುವುದಕ್ಕೂ ಚೆನ್ನಾಗಿದೆ.

— ಸ್ವದೇಶಾಭಿಮಾನಿ, 22-4-49.

ನಮ್ಮ ಸಮಾಜದಲ್ಲಿ ನರಳಿ ಹಾರಿಗೆಡುತ್ತಿರುವ ಹೆಣ್ಣುಮಕ್ಕಳ ದುಸ್ಥಿತಿಯನ್ನು ವರ್ಣಿಸಿ, ಅವರ ಉದ್ಧಾರವನ್ನು ನವತರುಣರು ಮಾಡಬೇಕೆಂದು ಪ್ರಚೋದಿಸುವ ಕೃತಿ ಈ ನಾಟಕ. ಸಮಾಜದ ಕಣ್ಣು ತೆರೆಯಿಸುವ ಇಂಥಾ ನಾಟಕಕ್ಕೆ ಪ್ರಗತಿಪರ ಕನ್ನಡಿಗರೆಲ್ಲರ ಬೆಂಬಲವಿದೆ.

— ಕತೆಗಾರ, ಜೂನ್, 1949.

**ರಣಚಂಡಿ :**—ಕಥೆಯು ಸವಿಗಟ್ಟು ಸಾಮಾನ್ಯವಾಗಿದ್ದರೂ ಬರೆಹದ ಸವಿಗಟ್ಟು ಬೆರಗನ್ನುಂಟುಮಾಡುತ್ತದೆ.

— ಸುಖಾಶ್ರಯ ಪ್ರಬೋಧ.

ಅವರ ಸರಳ ಶೈಲಿ, ತಿಳಿಹಾಸ್ಯ, ಪಾತ್ರರಚನಾ ಕೌಶಲ ಇವೆಲ್ಲಾ ಅವರ ಬರೆಹಗಳಿಗೆ ಮೆರಗು ಕೊಡುತ್ತವೆ.

— ಕತೆಗಾರ, ಆಗಸ್ಟ್, 1950.

ಲೇಖಕರು ನಾಟಕವನ್ನು ಸ್ವಾರಸ್ಯ ಕಳೆಯದಂತೆ ನಿರ್ವಹಿಸಿದ್ದಾರೆ.

— ತಾಯಿನಾಡು.

**ಉಷಾ ಸ್ವಯಂವರ :**— ಈ ನಾಟಕವು ರಂಗಭೂಮಿಗೆ ಅನುವಾಗಿ ಜನ ರಂಜನೆಗೆ ಒಗ್ಗುವಂತೆ ಹಾಡುಗಳಿಂದ ಕೂಡಿದೆ.

— ವಿಶ್ವಕರ್ನಾಟಕ, 17-4-50.

ಇದು ಹಳೇ ಪೌರಾಣೋಕ್ತ ತಂಗಳ ಕತೆಯಾದರೂ ಶ್ರೀ ತಿರುಕರ ಅಕ್ಕರದ ಲೆಖ್ಖಣಿಕೆಯ ಸೊಬಗಿನಿಂದ ತಿಂಗಳಬೆಳಕನ್ನುಂಟುಮಾಡುತ್ತದೆ.

— ಸುಖಾಶ್ರಯ ಪ್ರಬೋಧ, ವಿಕೃತಿ ಸಂ. ಜ್ಯೇಷ್ಠ.

ಪೌರಾಣಿಕ ನಾಟಕಕ್ಕೂ ಸಾಹಿತ್ಯದ ಮೆರುಗನ್ನು ಕೊಟ್ಟು ಎಲ್ಲ ದರ್ಜೆಯ ವಾಚಕರೂ ಓದುವಂತಹ ಆಕರ್ಷಕ ಶೈಲಿಯಲ್ಲಿ ರಚಿಸಿದ್ದಾರೆ.

— ತಾಯಿನಾಡು, 13-5-50.

**ಹಣ್ಣುಕಾಯಿ :**—ಲೇಖಕರಿಗೆ ಕನ್ನಡ–ಕರ್ನಾಟಕ **ಪ್ರೇಮ ಹೆಚ್ಚೆಂಬು** ಕಾಣುತ್ತೆ. ಅಂತೆಯೇ "ಕನ್ನಡಿಗರೊಡನೆ ಬಾಂಧವ್ಯ ಉಳಿಸಿದುದಕ್ಕೆ...." ಎಂದು ಹೇಳಿದ್ದಾರೆ. ಒಟ್ಟಿನಲ್ಲಿ ಕವನಸಂಗ್ರಹ ಉತ್ತಮವಾಗಿದೆ. ಅಲ್ಲಲ್ಲಿ ಸರಳರೂಪದಲ್ಲಿ ಗಹನ ತತ್ವಗಳನ್ನಡಗಿಸಿ ಬರೆದಿರುವ ಪದ್ಯಗಳೂ ಕಾಣುತ್ತವೆ.

ಭಾವಗೀತೆ, ಪದ್ಯ, ಲಾವಣಿ ಮೊದಲಾದುವುಗಳ ಸಮರಸ ಬೆರಕೆಯನ್ನುಳ್ಳ ಈ ಸುರಸ ಕವನಸಂಗ್ರಹವನ್ನು ಎಲ್ಲರೂ ಆದರದಿಂದ ಸ್ವಾಗತಿಸಬಹುದಾಗಿದೆ.

— ತಾಯಿನಾಡು, 9–1–50.

ಈ ಹಣ್ಣುಕಾಯಿಗಳಲ್ಲಿ "ತಿರುಕ"ರು ತಮ್ಮ ಆತ್ಮಸಂತೋಷಕ್ಕಾಗಿ ರಚಿಸಿ ಕೊಟ್ಟಿರುವ ಹಲಕೆಲವು ಪದ್ಯಗಳು ಭಾವಗರ್ಭಿತವಾಗಿಯೂ, ಶ್ರಾವ್ಯವಾಗಿಯೂ, ಅರ್ಥವತ್ತಾಗಿಯೂ ಇವೆ.

— ಸುಬೋಧ, ಜನವರಿ, 1950.

ಈ ಕವಿತಾಸಂಕಲನದಲ್ಲಿ ಕವನಗಳ ಸಂಗ್ರಹ, ಕ್ರೀಡಾರಂಗದ ಹಾಡು, ಮೇಳ, ದೇವರನಾಮ ಮತ್ತು ಭಾವಗೀತೆಗಳು ಎಂಬ ಮೂರು ಭಾಗಗಳಿವೆ. ಕಾಲ್ದಳಗೀತಾ, ಲೆಜಿಂ, ಡಂಬೆಲ್ಸ್ ಮೊದಲಾದ ತಾಳಬದ್ಧ ಸಾಂಘಿಕ ವ್ಯಾಯಾಮಕ್ಕಾಗಿ ಬರೆದ ಕವಿತೆ ಇವೆ.

— ಪುಸ್ತಕ ಪ್ರಪಂಚ, ಜನವರಿ, 1950.

**ಪೂಜೆ :**—ಎಲ್ಲ ಕವನಗಳ ಹಿಂದೆಯೂ ಉನ್ನತ ಮನನೀಯ ನೀತಿ ಇದೆ. ಉನ್ನತ ಭಾವನೆಗಳಿಲ್ಲಿವೆ. ನಾಡ ಜನತೆಯ ಪೂಜೆಗಾಗಿ ತನ್ನ ಅರಳಿದ ಹೃದಯಪುಷ್ಪದ ಮಾಲೆಯನ್ನೇ ಈ "ತಿರುಕ" ಅರ್ಪಿಸಿದ್ದಾನೆ! ಬಾಳ ಬೆಳಕಿನ ಕಿರಣ ಇದು.

— ತಾಯಿನಾಡು, 17–11–51.

ಬಾಳಿನಲ್ಲಿ ವ್ಯಕ್ತವಾಗುವ ಶ್ರೇಷ್ಠವಾದ ಕಲ್ಪನಾ ವಿಲಾಸವೇ ಇಲ್ಲಿನ ಕವಿತೆಯ ಗುಣ. ಮುಖ್ಯ ಗುರಿ ಮನಸ್ಸಿನ ಪರಿಪಕ್ವತೆಯನ್ನು ಸಾರಿಹೇಳುವುದು. ಲೇಖಕರು ಸಲ್ಲಿಸುತ್ತಿರುವ ಸಾರ್ವಜನಿಕ ಸೇವೆ ಹೇಗೆ ಜನಪ್ರಿಯವೆನ್ನಿಸಿದೆಯೋ ಅಂತೆಯೇ ಅವರು ಕೈಕೊಂಡಿರುವ ಈ ಸಾಹಿತ್ಯಸೇವೆಯೂ ಜನಕ್ಕೆ ಪ್ರಿಯವಾಗಲೆಂದು ಕೋರುತ್ತೇವೆ.

— ಕಥಾವಳಿ, ಡಿಸೆಂಬರ್, 1951.

ಪೂಜೆ ಸುಂದರವಾಗಿ ಮುದ್ರಿತವಾಗಿದೆ. ಈ ಸಂಗ್ರಹದಿಂದ ಅರಳಿದ ಕುಸುಮಗಳನ್ನು ಆಯ್ದುಕೊಳ್ಳುವುದಕ್ಕಾಗಿ ಓದುಗರು "ಪೂಜೆ"ಯನ್ನು ಕೈಗೆತ್ತಿಕೊಳ್ಳಬೇಕು.

— ಚಿತ್ರಗುಪ್ತ, 13–1–52.

**ಕೊನೆಯ ಗುಟುಕು :**—"ಕೊನೆಯ ಗುಟುಕು" ಕಾದಂಬರಿಯ, ಕಥಾನಾಯಕಿ ಶಾಂತೆಯು ಸುಶಿಕ್ಷಿತ ಸುಶೀಲ ತರುಣಿಯಾದರೂ ತನ್ನ ಜೀವಿತದ ಮಧ್ಯಕಾಲದಲ್ಲಿ ಬಂದೊದಗಿದ ದುರದೃಷ್ಟಕರ ತೊನ್ನುರೋಗದ ನಿಮಿತ್ತ ನಿಷ್ಕರುಣೀ ಸಮಾಜದ ಮೂದಲಿಕೆಗಳ ಸುಳಿಗೆ ಸಿಕ್ಕಿ ಜಿಗುಪ್ಸೆ–ನಿರಾಶೆಗಳಿಂದ ನೊಂದು ಕೊನೆಗೆ ಆತ್ಮಾರ್ಪಣ ಮಾಡಿದ ದುರಂತ ಕತೆಯನ್ನು ಲೇಖಕರು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಪ್ರಜಾವಾಣಿ, ಮಾರ್ಚ 25, 1951.

**ಮೂಳೆಯ ಹಂದರ :**—ಇದು ಕಟ್ಟುಕಥೆಯಲ್ಲ. "ತಿರುಕ" ಎಂಬ ನಾಮಾಂಕಿತದಿಂದ ಸಾಧು ರಾಘವೇಂದ್ರರಾಯರು ತಮ್ಮ ಆತ್ಮಕಥೆಯನ್ನೇ ನಿರೂಪಿಸಿದ್ದಾರೆ. ಗ್ರಂಥವು ಲೇಖಕರ ಅತ್ಯುನ್ನತ ಮಟ್ಟದ ಸಾಹಿತ್ಯವನ್ನು ಪ್ರತಿಬಿಂಬಿಸುವ ಕೈಗನ್ನಡಿಯಂತಿದೆ. ಶೈಲಿಯು ಸರಳ ಮತ್ತು ಭಾವಪೂರ್ಣ.

— ಸೇವಾಸದನ, 16–3–54.

"ತಿರುಕ"ರು ಇದನ್ನು ಕಾದಂಬರಿ ಎಂದು ಕರೆದಿದ್ದಾರೆ. ಕಥಾನಾಯಕ ಗುರುಚರಣನ ವ್ಯಕ್ತಿತ್ವದಲ್ಲಿ ತಮಗೆ ಪ್ರಿಯವಾದ ಆದರ್ಶವನ್ನು ತುಂಬಿ ಜೀವನ ವೃತ್ತಾಂತದ ರೀತಿಯಲ್ಲಿ ಒಂದು ಕೃತಿಯನ್ನು ರಚಿಸಿದ್ದಾರೆ.

— ಚಿತ್ರಗುಪ್ತ, 16 ನವೆಂಬರ್, 1952.

ಅಂದು ಬಾಪೂಜಿ ಶ್ರೀ ಗಾಂಧೀಜಿಯವರು ತಮ್ಮ ಸ್ವೀಯಚರಿತ್ರೆಯನ್ನು ಬರೆದುಕೊಂಡಂತೆ ಇಂದು ಅವರ ಅನುಯಾಯಿಗಳಾದ ಶ್ರೀಮಾನ್ ತಿರುಕರು ಕೂಡ ತಮ್ಮ ಸ್ವೀಯಚರಿತ್ರೆಯನ್ನು ಈ "ಮೂಳೆಯ ಹಂದರ" ವೆಂಬ ಹೆಸರಿನಿಂದ ಆಶ್ರಮದ ಪರವಾಗಿ ಹೊರಗೆಡಹಿದುದು ಪೂಜ್ಯ ಗಾಂಧೀಜೀಯ ಸತ್ಯಸಂದೇಶವನ್ನೆತ್ತಿ ತೋರಿಸುತ್ತದೆ. ಮೊತ್ತಮೊದಲಲ್ಲಿ ಈ ಗ್ರಂಥದಿಂದ ಓದುಗರು ಅನಾಥಸೇವಾಶ್ರಮದ ಸಂಪೂರ್ಣ ಪರಿಚಯ ಮಾಡಿಕೊಳ್ಳಬಹುದು.

— ಸುಖಾಶ್ರಯ ಪ್ರಬೋಧ, 1874ನೇ ನಂದನ ಸಂ. ಮಾಘ.

**ಚಿತೆಯೋ ಸಮಾಧಿಯೋ :**—ಲೋಕಸೇವೆಗೆಂದು ಜೀವನವನ್ನು ಮುಡಿಪಾಗಿ ಇಟ್ಟು, ಹಗಲೂ ಇರುಳೂ ಲೋಕಸೇವೆಗಾಗಿ ದುಡಿಯುತ್ತಿರುವವರ ಸ್ವಾನುಭವದ ಆಧಾರದ ಮೇಲೆ ಬರೆದಿರುವ ಕಾದಂಬರಿ ಇದು.

— ಜನಪ್ರಗತಿ, ಅಕ್ಟೋಬರ್ 4, 1953.

ಇದು ಸಾಧಕನೊಬ್ಬನ ಜೀವನವೃತ್ತವೂ ಹೌದು; ರಮ್ಯ ಕಾದಂಬರಿಯೂ ಹೌದು. ಕಲ್ಪನೆಯನ್ನು ಮೀರಿಸುವಷ್ಟು ಅದ್ಭುತವಾದ ವಾಸ್ತವಜೀವನವನ್ನು ಚಿತ್ರಿಸಿ, "ತಿರುಕ"ರೊಂದು ಕೃತಿ ರಚಿಸಿದ್ದಾರೆ. ಈ ಕೃತಿಯ ಮೂಲಕ ಓದುಗರು ಮೂಕರಾಗುವ ಹಾಗೆ ಸಮಾಜಕ್ಕೆ ಸವಾಲುಗಳನ್ನು ಹಾಕಿದ್ದಾರೆ. ಉತ್ತರ ಕೊಡುವವರು ಯಾರು ? .... ಯಾರು ?

— ಚಿತ್ರಗುಪ್ತ, 10 ಮೇ, 1953.

**ಉದಯಾಸ್ತ** :—ಲೇಖಕರು ಆದರ್ಶವಾದಿಗಳೆಂದು ತಿಳಿದುಬರುತ್ತದೆ, ಅವರು ಚಿತ್ರಿಸಿರುವ ಸಮಾಜವು ನಮ್ಮಲ್ಲಿ ನಿಜವಾಗಿ ಬಂದರೆ ಅದು ನಮ್ಮ ಸುದೈವ. ಒಟ್ಟಿನಲ್ಲಿ ಕಾದಂಬರಿಯು ಓದಲು ಚನ್ನಾಗಿದೆ. ಚಂಪೆಯ "ಉದಯಾಸ್ತ" ಹೃದಯಂಗಮವಾಗಿ ಇವೆ. ಕನ್ನಡಿಗರು ಈ ಕಾದಂಬರಿಯನ್ನು ಓದಿ ಆದರ್ಶಜೀವಿಗಳಾಗಬೇಕೆಂದು ಬಯಸುತ್ತೇವೆ.

— ಕತೆಗಾರ, 1954.

ಕತೆಯ ವಾತಾವರಣ ಸಾಮಾನ್ಯ ಜೀವನಕ್ಕೆ ಸಂಬಂಧಿಸಿದ್ದು. ಉತ್ತಮ ಕುಲದಲ್ಲಿ ಹುಟ್ಟಿ ಅದೃಷ್ಟದಿಂದ ತಿರುಪೆಗೆ ಬಿದ್ದ ತಂದೆಮಗಳು ಅಭಿಮಾನದ ಜೀವನವನ್ನು ನಡೆಸಿದರು. ಮಾನವ ಎಂಥ ವೃತ್ತಿಯಲ್ಲಿರಲಿ, ವೃತ್ತಿಗೆ ಸಂಬಂಧಿಸಿದಂತೆ ನೀಚರೂ ಸದ್ಗೃಹಸ್ಥರೂ ಇದ್ದೇ ಇರುತ್ತಾರೆ. ಕಷ್ಟಸುಖಗಳು ಮಾನವನ ಜೊತೆಯಲ್ಲಿ ಹುಟ್ಟಿ ಬೆಳೆಯುತ್ತವೆ. ನಮ್ಮ ಧೃತಿ ಒಂದು, ನಡತೆ ಒಂದು, ಮನಸ್ಸು ಒಂದು ಎಂದು ನಡೆದರೆ ತನಗೆ ಕಷ್ಟ ಒದಗಿದರೂ ಆತ್ಮಾನಂದ ಉಂಟು. ಸಮಾಜದ ದೃಷ್ಟಿಯಿಂದಲೂ ಒಳ್ಳೆಯ ಜೀವ ಎಂಬ ಕೀರ್ತಿಯುಂಟು ಎಂಬುದನ್ನೂ ಕಾದಂಬರಿ ಸೂಚಿಸುತ್ತದೆ.

— ಕನ್ನಡನುಡಿ, ಮೇ, 1954.

ಕಾದಂಬರಿ ಕ್ಷೇತ್ರದಲ್ಲಿ "ತಿರುಕ" "ಉದಯಾಸ್ತ" ಕಾದಂಬರಿಯನ್ನು ರಚಿಸಿ ತಮ್ಮದೇ ಆದ ವೈಶಿಷ್ಟ್ಯವನ್ನು ಗಳಿಸಿದ್ದಾರೆ. ಶ್ರೀ ತಿರುಕರು ಭಿಕ್ಷುಕವರ್ಗವನ್ನು ತಮ್ಮ ಕಾದಂಬರಿಯ ಮೂಲವಸ್ತುವಾಗಿ ಆಯ್ದುಕೊಂಡು ಭಿಕ್ಷಾವೃತ್ತಿಯಲ್ಲಿರುವ ಭಿನ್ನಭಾಷ ನನ್ಯಾಯ ಮೊದಲಾದುವುಗಳನ್ನು ತಮ್ಮ ಈ ಕಾದಂಬರಿಯಲ್ಲಿ ಉತ್ತಮ ಮಟ್ಟದಲ್ಲಿ ಚಿತ್ರಿಸಿದ್ದಾರೆ.

— ಜನವಾಣಿ, 24-4-54.

In this, his fourth novel, the author has admirably portrayed the life of a begger girl, Champa. When he

took up this work, the author admits, he had no definite plans, but, as he began to wield his pen, he asserts to have been inspired into creating a number of ideal characters most of whom move about in an atmosphere of love and affection. Passion, which is made to appear indispensable in most of the present-day novels, has fortunately no place in this book. 'Tiruka' has remarkably succeeded in evoking the true sympathy of the reader for the helpless.

— DECCAN HERALD.

**ದೇವರ ಉಪವಾಸ :**—ಹತ್ತು ಸಣ್ಣ ಕತೆಗಳನ್ನು ಒಳಗೊಂಡಿರುವ ಈ ಸಣ್ಣ ಪುಸ್ತಕವನ್ನು ಆದರದಿಂದ ಸ್ವಾಗತಿಸುತ್ತೇವೆ. ಕಥಾವಸ್ತು, ಕಥಾ ಧ್ಯೇಯಗಳೆರಡೂ ಬಹಳ ಗಮನಾರ್ಹವಾಗಿವೆ. ಉದಾತ್ತ ನೀತಿ ಪ್ರಚಾರವನ್ನು ಸ್ಪಷ್ಟವಾಗಿ ಕಾಣಬಹುದು.

— ಕಥಾವಳಿ, ಏಪ್ರಿಲ್, 51.

ಇವು ಸರಸ ಸಂಕಥನ ಶೈಲಿಯಲ್ಲಿವೆ. ಕಥನದ ಬಗ್ಗೆ ಸಂವಾದದ ಪುಟ್ಟದ್ದು. ಬೇಸರವಾಗದು ಓದುವುದಕ್ಕೆ.

— ಕರ್ಮವೀರ, 12-3-50.

**ಮಹಾಕವಿ ಭಾರವಿ :**— ........ ಅಪಾರವಾದ ಪದಸಂಪತ್ತಿನಿಂದ ಹೊರಪಿಪ್ಪ ಚತುರ ಸಂಭಾಷಣೆ, ಹಿತಮಿತವಾದ ಹಾಸ್ಯ, ಇಂಪಾದ ಹಾಡುಗಳು ಇವುಗಳಿಂದ ನಾಟಕ ಉತ್ತಮ ಕೃತಿಗಳ ಪಂಕ್ತಿಗೆ ಸೇರಲು ತಕ್ಕುದಾಗಿದೆ. ........ ಎಲ್ಲೂ ಬೇಸರವಿಲ್ಲದೆ ನೋಟಕರ ಕುತೂಹಲವನ್ನು ಹಿಡಿದಿಡುವ ಶಕ್ತಿ ಈ ಕೃತಿಗಿದೆ. ಪ್ರತಿಯೊಂದು ಪಾತ್ರದ ರಸಪೋಷಣೆ ಯುಕ್ತವಾಗಿದೆ. ಪಾತ್ರಪೋಷಣೆಯನ್ನು ನಾಟಕದ ಸಮಗ್ರತೆಯನ್ನು ದೃಷ್ಟಿಯಲ್ಲಿಟ್ಟು ಬಹು ಜಾಗರೂಕವಾಗಿ ಮಾಡಿದ್ದಾರೆ. ........ ಮನೋರಂಜನೆಯೊಡನೆ ವಿಚಾರ ದೃಷ್ಟಿಯಿಂದ ಕೂಡಿದ ಇಂಥಾ ನಾಟಕಗಳು ನಮ್ಮ ಜನತೆಗೆ ಅಗತ್ಯ ಬೇಕು. ದೇಶಾದ್ಯಂತ ಈ ನಾಟಕ ಪ್ರದರ್ಶಿತವಾಗಲಿ; ಜನ ನೋಡಿ, ನಲಿದು, ಅರಿಯಲಿ.

— ಕತೆಗಾರ, 1-6-55.

........ ಭಾರವಿಯ ಪ್ರೌಢಿಮೆಯನ್ನು ಸಾರುವುದು ಮಾತ್ರವಲ್ಲದೆ ಜನಜೀವನದ ಸಾಫಲ್ಯದ ಹಾದಿಯನ್ನು ಈ ನಾಟಕ ತೋರಿಸಿಕೊಟ್ಟಿದೆ. ........ ಪ್ರತಿಯೊಂದು ಮಾತು

ಗಳೂ ಸಾಹಿತ್ಯ ಸತ್ವದಿಂದಲೂ, ನೀತಿಬೋಧೆಯಿಂದಲೂ, ಸಮಾಜದರ್ಶನದಿಂದಲೂ ಹೃದಯವನ್ನು ಕಲಕುತ್ತವೆ. 'ಮಹಾಕವಿ ಭಾರವಿ' ಉತ್ತಮ ನಾಟಕ.

ರಾಯಭಾರಿ, 13-4-55.

........ ಭಾರತದ ಪ್ರಾಚೀನ ಮಹಾಕವಿಗಳಲ್ಲೊಬ್ಬನೆಂದು ಪರಿಗಣಿಸಲ್ಪಡುತ್ತಿರುವ ಭಾರವಿಯ ಬಗ್ಗೆ ಹೆಚ್ಚಿನ ಅಂಶಗಳು ಉಪಲಬ್ಧವಿಲ್ಲ. ಸಿಕ್ಕಷ್ಟು ಆಧಾರಗಳಿಗೆ ಕಲ್ಪನೆಯ ಮೆರುಗನ್ನಿತ್ತು 'ಭಾರವಿ' ನಾಟಕ ಬರೆಯಲಾಗಿದೆ. ನಾಟಕದ ಕಥಾವಸ್ತು ಸುಂದರ ವಾಗಿದೆ. ಭಾರವಿಯ ಮನಸ್ಸಿನ ಉದ್ವೇಗಚಿತ್ರಣವು ಸುಂದರವಾಗಿದೆ. ಸಂಭಾಷಣೆಗಳೂ ಚನ್ನಾಗಿವೆ.

— ಕರ್ಮವೀರ, ಏಪ್ರಿಲ್ 25, 1955.

ಸ್ಥಳೀಯ ಸಂಸ್ಥೆಗಳ ಕಮೀಷನರ್‌ರವರ ಕಮ್ಯುನಿಕೇಷ ನಂ. E. 7 C. 1753 | 52-53—13-4-53; R. D. R. 7-1507 | 52-53—13-12-52 ಮತ್ತು R. D. R. 7-776 | 50-51—3-8-50 ಗಳ ಮೇರೆಗೆ ನಮ್ಮ ಪುಸ್ತಕಗಳು ಗ್ರಾಮಪಂಚಾಯಿತಿಗಳಿಗೂ ಮತ್ತು ವಿದ್ಯಾ ಇಲಾಖೆಯ ಡೈರೆಕ್ಟರ್‌ರವರ T. B. C. 9 | 49-50—8-8-50 ಮತ್ತು D. 67 | 51-52—9-2-52 ಗಳ ಅಪ್ಪಣೆ ಮೇರೆ ವಿದ್ಯಾಸಂಸ್ಥೆಗಳ ಲೈಬ್ರರಿ ಗಳಿಗೂ ಮಂಜೂರಾಗಿದೆ. ಈ ಪುಸ್ತಕಗಳ ಮಾರಾಟದಿಂದ ಬರುವ ಹಣವು ಜನಸೇವೆಯ ಈ ಪವಿತ್ರ ಕಾರ್ಯಕ್ಕಾಗಿಯೇ ಉಪಯೋಗಿಸಲ್ಪಡುವುದರಿಂದ ಗ್ರಾಮಪಂಚಾಯಿತಿಗಳೂ, ವಿದ್ಯಾಸಂಸ್ಥೆಗಳೂ ತಮ್ಮ ಸಂಪೂರ್ಣ ನೆರವು ನೀಡ ಬೇಕೆಂದು ಕೋರಲಾಗಿದೆ.

— ಪ್ರಕಾಶಕರು.

# ಅನಾಥ ಸೇವಾಶ್ರಮ

(ಸ್ಥಾಪನೆ: ೧೯೪೩)

**ಮಲ್ಲಾಡಿಹಳ್ಳಿ ಪೋಸ್ಟ್.** (ಹೊಳಲ್ಕೆರೆ ತಾಲ್ಲೂಕು)

:+|:|+:

ಪ್ರಿಯ ಬಂಧುಗಳೇ,

ಇದೊಂದು ಸಾರ್ವಜನಿಕ ಸೇವಾ ಕೇಂದ್ರ. ಜಾತಿ-ಕುಲಗಳ ಭೇದವಿಲ್ಲದೆ ಜನ ಸಾಮಾನ್ಯರ ಹಿತದೃಷ್ಟಿಯಿಂದ ಈ ಸಂಸ್ಥೆಯು ದುಡಿಯುತ್ತಿದೆ. ಆರ್ಯಸಂಸ್ಕೃತಿಯ ಮೂಲ ತಳಹದಿಯ ಮೇಲೆ ಇವುಗಳೆರಡರ ಗುರಿಯನ್ನೂ ಸಾಧಿಸಿ ಮಾನವನ ಜೀವನ ಸಾಫಲ್ಯಗೊಳಿಸುವ ಸದುದ್ದೇಶದಿಂದ ಈ ಸಂಸ್ಥೆಯು ಪ್ರಾರಂಭಿಸಲ್ಪಟ್ಟಿದೆ.

ವಿವಿಧ ರೋಗದಿಂದ ನರಳುವ ಸಾವಿರಾರು ಜನ ಸಂತ್ರಸ್ತರಿಗೆ ಆಶ್ರಮದಲ್ಲಿ ಉಚಿತ ಚಿಕಿತ್ಸೆಯು ನಡೆಯುತ್ತಿದೆ. ರೋಗಿಗಳಿಗಾಗಿ ರುಗ್ಣಾಲಯದ ವ್ಯವಸ್ಥೆಯಾಗಿದೆ.

ನೂರಾರು ಬಡ ವಿದ್ಯಾರ್ಥಿಗಳ ಪಾಲನೆ ಪೋಷಣೆಯು ಆಶ್ರಮದಿಂದಲೇ ನಡೆದು ಅವರಿಗೆ ಪ್ರೌಢವಿದ್ಯಾಭ್ಯಾಸದವರೆಗಿನ ಶಿಕ್ಷಣವು ಆಶ್ರಮದಲ್ಲಿ ಕೊಡಲ್ಪಡುತ್ತಿದೆ. ಆಶ್ರಮದಿಂದಲೇ ಒಂದು ಪ್ರೌಢವಿದ್ಯಾಶಾಲೆಯು ನಡೆಸಲ್ಪಡುತ್ತಿದೆ.

ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ಪದ್ಧತಿಯ ವಿವಿಧ ಅಂಗಸಾಧನೆಗಳ ಶಿಕ್ಷಣವು ಆಶ್ರಮದಲ್ಲೇ ಕೊಡಲ್ಪಡುತ್ತಿದೆ. ಇದಕ್ಕಾಗಿ ಭವ್ಯವಾದೊಂದು ವ್ಯಾಯಾಮಶಾಲೆಯು ನಿರ್ಮಿತವಾಗಿದೆ.

ಆಸನ, ಪ್ರಾಣಾಯಾಮ, ಯೋಗಾಭ್ಯಾಸದ ಒಂದು ಶಿಕ್ಷಣಾಂಗವೂ ಆಶ್ರಮದಲ್ಲಿದೆ. ಅದಕ್ಕೆ ಬೇಕಾದ ಅನುಕೂಲ್ಯವನ್ನು ಕಲ್ಪಿಸಿಕೊಡಲಾಗಿದೆ; ಇದರ ಅಂಗವಾಗಿ ತಪೋವನ, ಸಾಧನಮಂಟಪ, ಯೋಗಮಂಟಪಗಳು ನಿರ್ಮಿತವಾಗಿವೆ.

ಆಶ್ರಮದಿಂದಲೇ ಒಂದು ಸಾಹಿತ್ಯಮಾಲೆಯು ಪ್ರಾರಂಭವಾಗಿ ಈಗಾಗಲೇ ಹಲವಾರು ಪುಸ್ತಕಗಳು ಹೊರಬಂದಿವೆ. ಇದಕ್ಕಾಗಿಯೇ ಆಶ್ರಮದಲ್ಲಿ ಒಂದು ಮುದ್ರಣಾಲಯವನ್ನು ತೆರೆಯಲಾಗಿದೆಯಲ್ಲದೆ ಸಾಧ್ಯವಾದಷ್ಟು ಜಾಗ್ರತೆ ಒಂದು ಪತ್ರಿಕೆಯನ್ನು ಹೊರಡಿಸಿ ಸಾಹಿತ್ಯಸೇವೆಯನ್ನು ಮುಂದುವರಿಸುವ ಇಚ್ಛೆಯೂ ಆಶ್ರಮಕ್ಕಿದೆ.

ಸಂಗೀತ, ನಾಟಕಗಳ ಸೇವೆಯೂ ಆಶ್ರಮದಿಂದ ನಡೆಯುತ್ತಿದೆಯಲ್ಲದೆ ಅನುಕೂಲ ವಾತಾವರಣ ಒದಗಿದಾಗ ಸಂಗೀತ, ನಾಟ್ಯಕಲಾ ಶಾಲೆಗಳನ್ನು ತೆರೆಯುವ ಮಹದಾಕಾಂಕ್ಷೆಯೂ ಆಶ್ರಮಕ್ಕಿದೆ.

ಒಂದು ಪುಸ್ತಕ ಭಂಡಾರ ಮತ್ತು ವಾಚನಾಲಯದ ಉಚಿತ ಸೇವೆಯನ್ನು ಆಶ್ರಮವು ನೀಡುತ್ತಿದೆ.

ಗ್ರಾಮ ಸಹಕಾರ ಸಂಘ, ಅಂಚೆ ಮನೆಗಳ ಅನುಕೂಲ್ಯವನ್ನು ಆಶ್ರಮವು ಹೊಂದಿರುತ್ತದೆ.

ಒಂದು ಗೋಶಾಲೆಯು ಆಶ್ರಮದಿಂದಲೇ ನಡೆಸಲ್ಪಡುತ್ತಿದ್ದು ರೋಗಿಗಳಿಗೂ, ಮಕ್ಕಳಿಗೂ ಮತ್ತು ವಿದ್ಯಾರ್ಥಿಗಳಿಗೂ ಉಚಿತವಾಗಿ ಹಾಲನ್ನು ಕೊಡುವ ವ್ಯವಸ್ಥೆ ಮಾಡಲಾಗಿದೆ.

ವೃತ್ತಿಶಿಕ್ಷಣಶಾಲೆಯೂ ಆಶ್ರಮದ ಸೇವಾಂಗಗಳಲ್ಲಿ ಸೇರಿಕೊಂಡಿದೆಯಲ್ಲದೆ ಈಗಾಗಲೇ ಮುದ್ರಣಶಾಖೆಯಲ್ಲಿಯೂ ಮತ್ತು ಇತರೆ ಕೆಲವು ಭಾಗಗಳಲ್ಲಿಯೂ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡಲ್ಪಡುತ್ತಿದ್ದು ಇದರ ಬೃಹದ್ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಆರ್ಥಿಕ ಸಹಾಯಕ್ಕಾಗಿ ಕಾಯುತ್ತಿದೆ.

ಆಯುರ್ವೇದ ಶಿಕ್ಷಣಾಲಯವೊಂದನ್ನು ಸ್ಥಾಪಿಸುವ ಮಹತ್ವಾಕಾಂಕ್ಷೆಯೂ ಆಶ್ರಮಕ್ಕಿದೆ.

ಅನಾಥ ಶಿಶು ಪೋಷಣಾಲಯ, ಅನಾಥ ಮಹಿಳಾ ಸೇವಾಶ್ರಮಗಳೂ ಆಶ್ರಮದ ಹಿರಿಯಾಸೆಗಳು. ಆದರೆ ಆರ್ಥಿಕ ಪರಿಸ್ಥಿತಿಯಿಂದಾಗಿ ಸಮಯ ನಿರೀಕ್ಷಿಸುತ್ತಿದೆ.

ಅಧ್ಯಾತ್ಮ ಬೆಳವಣಿಗೆಯ ದೃಷ್ಟಿಯಿಂದಲೂ ಆಶ್ರಮವು ದುಡಿಯುತ್ತಿದೆ.

ಶ್ರಮದಾನ ಯಜ್ಞದ ಫಲವಾಗಿ ಒಂದು ಸುಸಜ್ಜಿತವಾದ ಗೋಶಾಲೆಯ ಕಟ್ಟಡ, ಕಲ್ಲುಕಟ್ಟಡವುಳ್ಳ ಸಿಹಿನೀರಿನ ಭಾವಿ ಮತ್ತು ಕಲ್ಯಾಣಮಂಟಪದಿಂದೊಡಗೂಡಿದ 'ವ್ಯಾಸಪೀಠ' ವೆಂಬ ಭವ್ಯ ಸಭಾಭವನ ಇವುಗಳನ್ನು ಕಟ್ಟಿಸಲಾಗಿದೆ.

ಆಶ್ರಮಕ್ಕೆ ಅವಶ್ಯಕವಾದ ವಿದ್ಯುಚ್ಛಕ್ತಿಯ ಪೂರೈಕೆಯನ್ನು ವ್ಯವಸ್ಥೆಮಾಡಲಾಗಿದೆ. ಮತ್ತು ವಿದ್ಯುಚ್ಛಕ್ತಿಯ ಸಹಾಯದಿಂದ ನೀರು ಸರಬರಾಜು ಮಾಡಿಕೊಳ್ಳುವ ಯೋಜನೆಯ ಬಗ್ಗೆ ಪ್ರಯತ್ನ ನಡೆದಿವೆ.

ಮುಂದಿನ ಮಹಾಯೋಜನೆಯನ್ನು ರೂಪಕ್ಕೆ ತರಲು ಸುಮಾರು ಹತ್ತು ಲಕ್ಷ ರೂಪಾಯಿಗಳಷ್ಟು ಅಂದಾಜನ್ನು ಮಾಡಲಾಗಿದೆ.

ಹೀಗೆ ಪಾರಮಾರ್ಥಿಕ ಮತ್ತು ಲೌಕಿಕ ಈ ಎರಡರ ಗುರಿಯನ್ನೂ ಕೇಂದ್ರೀಕೃತವನ್ನಾಗಿರಿಸಿಕೊಂಡು ದುಡಿಯುತ್ತಿರುವ ಈ ಆಶ್ರಮಕ್ಕೆ ಧನ ಧಾನ್ಯ ರೂಪವಾದ ಉದಾರ ಸಹಾಯವನ್ನು ನೀಡಿ ಜನತೆಯು ಸಹಕರಿಸಬೇಕಾಗಿ ಕೋರಿದೆ.

**ವ್ಯವಸ್ಥಾಪಕ,**
**ಅನಾಥ ಸೇವಾಶ್ರಮ.**

---

**ವಿ. ಸೂ.**—ಸಹಾಯಮಾಡಲು ಇಚ್ಛೆಯುಳ್ಳ ಮಹನೀಯರು ಈ ಮೇಲ್ಕಂಡ ವಿಳಾಸಕ್ಕೆ ತಮ್ಮ ಉದಾರವಾದ ಸಹಾಯವನ್ನು ಕಳುಹಿಸಬೇಕಾಗಿ ಕೋರಿದೆ.

# ಬೇಕಾಗಿದ್ದಾರೆ !

---

**ಸೇವಾಮನೋಭಾವವುಳ್ಳ ಉತ್ಸಾಹೀ ವಿದ್ಯಾವಂತ ತರುಣ-ತರುಣಿಯರಲ್ಲಿ ವಿನಂತಿ.**

ಭವ್ಯಭಾರತದ ನಿರ್ಮಾಣಕಾರ್ಯದ ಸೇವೆಯ ಗುರಿಯಲ್ಲಿ ದಿನದಿನಕ್ಕೆ ವಿಸ್ತೃತವಾಗಿ ಬೆಳೆಯುತ್ತಿರುವ ಆಶ್ರಮದ ಹಲವು ಸೇವಾಕ್ಷೇತ್ರದ ಕಾರ್ಯದಲ್ಲಿ ಭಾಗಿಗಳಾಗಿ ಉಚಿತ ಸೇವೆಯನ್ನು ಸಲ್ಲಿಸಲು ಸಿದ್ಧರಾಗಿರುವ ಶಿಲ್ಪಿಗಳು, ಚಿತ್ರಗಾರರು, ಸಂಗೀತ ನಾಟ್ಯ ಕಲಾವಿದರು, ವೃತ್ತಶಿಕ್ಷಕರೂ, ಕೆಲಸಗಾರರು ಆಧ್ಯಾತ್ಮಿಕ ಮನೋಭಾವವುಳ್ಳ ಆರೋಗ್ಯದೃಢಕಾಯರಾದ ವಿದ್ಯಾವಂತ ಸ್ತ್ರೀ-ಪುರುಷರು ಬೇಕಾಗಿದ್ದಾರೆ. ನಮ್ಮೀ ಸೇವಾಯಜ್ಞದಲ್ಲಿ ಭಾಗಿಯಾಗಲಿಚ್ಛಿಸುವಉತ್ಸಾಹಿಗಳು ತಮ್ಮ ವಯಸ್ಸು, ವಿದ್ಯೆ, ರಚನಾತ್ಮಕ ಸೇವಾಕಾರ್ಯದಲ್ಲಿ ತಮಗಿರುವ ಅನುಭವಗಳನ್ನೊಳಗೊಂಡ ವಿವರವಾದ ನಿವೇದನಾಪತ್ರ ವನ್ನು ಸಲ್ಲಿಸಬೇಕಾಗಿ ಕೋರಿದೆ. ಸೇರುವ ಕಾರ್ಯಕರ್ತರಿಗೆ ಆಶ್ರಮದಲ್ಲಿ ಉಚಿತ ಊಟ-ವಸತಿಯ ಸೌಕರ್ಯವನ್ನು ಮಾತ್ರ ಏರ್ಪಡಿಸಿಕೊಡಲಾಗುವುದಲ್ಲದೆ ಬೇರೆ ಯಾವ ಪ್ರತಿ ಫಲವನ್ನೂ ಕೊಡಲಾಗುವುದಿಲ್ಲ. ಸಂಸಾರದ ಪೋಷಣೆಯ ಹೊಣೆಗಾರಿಕೆ ಇರುವ ಸೇವಾಕರ್ತರಿಗಿಲ್ಲಿ ಅವಕಾಶವಿಲ್ಲ. ಉತ್ತರ ಕ್ಕಾಗಿ ಅರ್ಜಿಗಳೊಡನೆ ಅಂಚೆಚೀಟಿಯನ್ನು ಕಳುಹಿಸಬೇಕಾಗಿ ಕೋರಿದೆ.

**ಸಂಚಾಲಕ,**
**ಅನಾಥಸೇವಾಶ್ರಮ,**
ಮಲ್ಲಾಡಿಹಳ್ಳಿ ಪೋಸ್ಟ್,
ಹೊಳಲ್ಕೆರೆ ತಾಲ್ಲೂಕು.